


WALT DISNEY'S

# Jungle Book Crown Collection

**ಗೋಲ್ಡ್‌ಸ್ಪೋಟರ್ಸ್ ಜಂಗ್ಲ್ ಬೂಕ್ ಆಲ್ಬಮ್‌ನ್ನು**

## ಉಚಿತವಾಗಿ

**ಪಡೆಯಿರಿ. ಮತ್ತು ಗೋಲ್ಡ್‌ಸ್ಪೋಟರ್ಸ್ 'ಫನ್ ಕಿಟ್' ಗೆಲ್ಲಿರಿ.**

ಈಗ, ನೀಲಿ ಕ್ರೌನ್ ಇರುವ ಪ್ರತಿಯೊಂದು ಬಾಟಲಿ ಗೋಲ್ಡ್‌ಸ್ಪೋಟ್‌ನ ವೈಶಿಷ್ಟ್ಯವೆಂದರೆ ಅದರ ಕ್ರೌನ್‌ನ ಅಡಿಯಲ್ಲಿ ಒಂದು ವರ್ಣರಂಜಿತ ಜಂಗ್ಲ್ ಬೂಕ್ ಚಿತ್ರ ಇದೆ.

ನಿಮ್ಮ ಜಂಗ್ಲ್ ಬೂಕ್ ಚಿತ್ರವನ್ನು ಕಂಡುಹಿಡಿಯಲು, ನೀವು ಕ್ರೌನ್‌ನ ಪ್ಲಾಸ್ಟಿಕ್ ಒಳಭಾಗವನ್ನು ಜಾಗರೂಕತೆಯಿಂದ ಸುಲಿಯಬೇಕು. ಪ್ಲಾಸ್ಟಿಕ್‌ನ ಮರೆಯಾಗಿರುವ ಬದಿಯಲ್ಲಿ ಚಿತ್ರವು ಮುದ್ರಿತವಾಗಿದೆ.

ನೀವು ಯಾವುದೇ ಆರು ಬೇರೆ ಬೇರೆ ಚಿತ್ರಗಳನ್ನು ಸಂಗ್ರಹಿಸಿದ ಮೇಲೆ ಅವುಗಳನ್ನು ಪ್ರವೇಶ-ಪತ್ರದ* ಮೇಲೆ ಹಚ್ಚಿರಿ. ಮತ್ತು ಆ ಪ್ರವೇಶ-ಪತ್ರದ ಬದಲಿಗೆ ಸುಂದರವಾದ ಜಂಗ್ಲ್ ಬೂಕ್ ಆಲ್ಬಮ್ ಪಡೆಯಿರಿ.

ಈಗ, ನಿಮ್ಮ ಆಲ್ಬಮ್‌ನ್ನು ಪೂರ್ತಿಗೊಳಿಸಲು ಜಂಗ್ಲ್ ಬೂಕ್ ಚಿತ್ರಗಳನ್ನು ಸಂಗ್ರಹಿಸುತ್ತಾ ಇರಿ. ಇದರಲ್ಲಿ ಸ್ವಾರಸ್ಯ ಉಂಟಾಗುವುದು ಈಗ. ಏಕೆಂದರೆ ಚಿತ್ರ ಸಂಗ್ರಹದಲ್ಲಿ ನಿಮ್ಮ ಸ್ನೇಹಿತರೊಡನೆ ಸ್ಪರ್ಧಿಸಬಹುದು. ಮತ್ತು ನಿಮ್ಮಲ್ಲಿ ಎರಡೆರಡು ಇರುವ ಚಿತ್ರಗಳನ್ನು ಅವರೊಡನೆ ಅದಲು ಬದಲು ಮಾಡಿಕೊಳ್ಳಬಹುದು. ನಿಮ್ಮ ಆಲ್ಬಮ್‌ನ್ನು ಪೂರ್ತಿಗೊಳಿಸಲು ಎಲ್ಲಾ 36 ಚಿತ್ರಗಳನ್ನೂ ಸಂಗ್ರಹಿಸಿದ ಮೇಲೆ ನೀವು ವಿಶೇಷವಾದ ಗೋಲ್ಡ್‌ಸ್ಪೋಟರ್ಸ್ 'ಫನ್ ಕಿಟ್' ಗೆಲ್ಲುವಿರಿ.

* ಪತ್ರಿಕೆಗಳಲ್ಲಿ ಪ್ರಕಟವಾಗುವ ಪ್ರವೇಶ-ಪತ್ರಗಳಿಗಾಗಿ ಕಾಯುತ್ತ ಇರಿ. ಅಥವಾ, ನಿಮ್ಮ ಸಮೀಪದ ಗೋಲ್ಡ್‌ಸ್ಪೋಟ್ ವ್ಯಾಪಾರಿಯಿಂದ ಅವುಗಳನ್ನು ಪಡೆಯಿರಿ. (ಸೂಚನೆ: ಈ ಯೋಜನೆ ಕೆಲವು ಆಯ್ದ ಪ್ರದೇಶಗಳಲ್ಲಿ ಮಾತ್ರ ಲಭ್ಯ)

ಆಲ್ಬಮ್‌ಗಳ ಸ್ಟಾಕು ಸೀಮಿತವಾಗಿದೆ. ಆದುದರಿಂದ ತ್ವರೆ ಮಾಡಿರಿ. ಅವು ಮುಗಿಯುವ ಮೊದಲೇ ನಿಮ್ಮದನ್ನು ಪಡೆಯಿರಿ.

Fun means Goldspotting



ಪ್ರವೇಶಧನವಿಲ್ಲ





# ಚಂದಮಾಮ ಕ್ಯಾಮಲ್

## ಬಣ್ಣಹಾಕುವ ಸ್ಪರ್ಧೆ

**ಗೆಲ್ಲಿರಿ ಈ ಬಹುಮಾನಗಳನ್ನು**
**ಕ್ಯಾಮೆಲ್**

1ನೆಯ ಬಹುಮಾನ ರೂ. 15/-
3 ಎರಡನೆಯ ಬಹುಮಾನಗಳು ರೂ. 10/-
10 ಮೂರನೆಯ ಬಹುಮಾನಗಳು ರೂ. 5/-
10 ಪ್ರಮಾಣ ಪತ್ರಗಳು

ಈ ಸ್ಪರ್ಧೆಯಲ್ಲಿ ಕೇವಲ 12 ವರ್ಷಗಳ ವರೆಗಿನ ವಯಸ್ಸಿನ ಮಕ್ಕಳು ಭಾಗವಹಿಸಬಹುದು. ಮೇಲೆ ಕಾಣಿಸಿದ ಚಿತ್ರಕ್ಕೆ ಸಂಪೂರ್ಣವಾಗಿ ಕ್ಯಾಮೆಲ್ ಬಣ್ಣಗಳಿಂದ ಬಣ್ಣ ಕೊಡಿರಿ ಮತ್ತು ಅದನ್ನು ಈ ವಿಳಾಸಕ್ಕೆ ಕಳಿಸಿರಿ :

ಪಿ. ಬಿ. ನಂ. 9928, ಕೊಲಾಬಾ, ಬೊಂಬಾಯಿ 400 005.

ನಿರ್ಣಾಯಕರ ನಿರ್ಣಯವೇ ಅಂತಿಮ ನಿರ್ಣಯವಾಗುವುದು ಮತ್ತು ಎಲ್ಲರೂ ಅದಕ್ಕೆ ಬದ್ಧರಾಗುವರು. ಪತ್ರವ್ಯವಹಾರವನ್ನು ಮಾಡಲಾಗುವುದಿಲ್ಲ. ಕೂಪನನ್ನು ಇಂಗ್ಲಿಷ್‌ನಲ್ಲಿ ಮಾತ್ರ ತುಂಬಿರಿ.

Name:............................................................ Age:..............................

Address:............................................................................................

.........................................................................................................

ಎಂಟ್ರಿಗಳನ್ನು ತಾರೀಖು 31—12—1982 ಮೊದಲೇ ಕಳಿಸಿರಿ.

**CONTEST NO.27**

VISION KAN

ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿ.

# ಚಂದಮಾಮ


ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ


**ಸಾ**ಧಾರಣವಾಗಿ ಎಲ್ಲರೂ ಅವರವರಿಗೆ ಸಾಧ್ಯವಾದ ಹಾಗೆ ವಿದ್ಯೆಗಳನ್ನು ಕಲಿಯುತ್ತಾರೆ. ಕೆಲವರು ಪಾಂಡಿತ್ಯ ಸಂಪಾದಿಸುತ್ತಾರೆ. ವಿದ್ಯೆಗೆ ವಿನಯವೇ ಭೂಷಣವೆಂದು ಹಿರಿಯರು ಹೇಳಿಟ್ಟಿರುವುದನ್ನು ನೋಡುವಾಗ, ವಿದ್ಯೆಗಳನ್ನು ಕಲಿತ ಹಾಗೆ ಅಹಂಕಾರವು ವಿವೇಕವನ್ನು ಮುಚ್ಚಿ ಮೇಲೆದ್ದುಬಿಡುವುದೇ ಹೆಚ್ಚಾಗಿ ಕಾಣುವುದರಿಂದ ಆಗಾಗ ಎಚ್ಚರಿಸಬೇಕಾಗುತ್ತದೆ. ಈ ಸಂಚಿಕೆಯಲ್ಲಿರುವ "ವಿದೂಷಕನ ಪ್ರಶ್ನೆ" ಅಂತಹ ಎಚ್ಚರಿಕೆ ನೀಡುವ ಕಥೆಯಾಗಿದೆ.

## ಅಮರವಾಣಿ

ಶರದಿ ನ ವರ್ಷತಿ ಗರ್ಜತಿ ವರ್ಷತಿ ವರ್ಷಾಸು ನಿಸ್ವನೋ ಮೇಘಃ
ನೀಚೋ ವದತಿ ನ ಕುರುತೇ ನ ವದತಿ ಸುಜನಃ ಕರೋತ್ಯೇವ

ಶರತ್ಕಾಲದ ಮೇಘವು ಗುಡುಗುತ್ತದೆಯೇ ಹೊರತು ಮಳೆಯಾಗದು. ವರ್ಷರ್ತು ಮೇಘವು ಗುಡುಗದೆಯೇ ಮಳೆಸುರಿಸುತ್ತದೆ. ಅಲ್ಪರು ಹೇಳುವರೇ ಹೊರತು ಮಾಡುವುದಿಲ್ಲ. ಉತ್ತಮರು ಹೇಳದೆಯೇ ಮಾಡುತ್ತಾರೆ.


ಸಂಪುಟ : ೬೯ 'ಡಿಸೆಂಬರ್ '೮೨ ಸಂಚಿಕೆ : ೬

ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦







# ಬಾವಿಯಲ್ಲಿ ನಿಧಿ

ಒಂದು ಊರಿನಲ್ಲಿ ಬಂಗಾರಪ್ಪನೆಂಬ ದೊಡ್ಡ ಲೇವಾದೇವಿಯವನಿದ್ದನು. ಅವನ ಮನೆಯಲ್ಲಿ ಅಪರಿಮಿತ ಧನವಿದೆಯೆಂದೂ ಎಷ್ಟೆಷ್ಟೋ ಚಿನ್ನಾಭರಣಗಳಿವೆಯೆಂದೂ ಹೇಳುತ್ತಿದ್ದರು. ಬಡ್ಡಿಗೆ ಸಾಲ ಕೊಡುವುದೂ ವಸೂಲು ಮಾಡುವುದೂ ಅಂದರೆ ಅವನಿಗೆ ನೀರು ಕುಡಿದ ಹಾಗೆ. ಆದುದರಿಂದಲೇ ಅವನ ಐಶ್ವರ್ಯ ಕುಂದದೆ ಏರುತ್ತಾ ಇತ್ತು.

ಅವನ ಸಂಗತಿಯನ್ನು ತಿಳಿದ ಒಬ್ಬ ಕಳ್ಳನಿಗೆ ಅವನ ಮನೆಯಲ್ಲಿ ಕಳ್ಳತನ ಮಾಡಬೇಕೆಂದು ಬುದ್ಧಿ ಹುಟ್ಟಿತು. ತನ್ನ ಕೆಲಸ ಸುಲಭವಾಗಲಿಕ್ಕಾಗಿ ಆ ಕಳ್ಳ ಒಂದು ದಿನ ಸಾಧುವಿನ ವೇಷದಲ್ಲಿ ಬಂಗಾರಪ್ಪನ ಮನೆಗೆ ಬಂದನು.

ಸಾಧಾರಣವಾಗಿ ಬಂಗಾರಪ್ಪನಿಗೆ ಸಾಧು ಸಂತರ ಮೇಲೆ ಭಯಭಕ್ತಿಗಳಿದ್ದುವು.

ಕಳ್ಳ ಸಾಧುವಿನ ಮೇಲೆ ಯಾವ ಸಂದೇಹವೂ ತೋರದೆ ಪೂಜ್ಯ ಭಾವನೆಯುಂಟಾಯಿತು. ಬಹಳ ಗೌರವದಿಂದ ವಿನೀತನಾಗಿ ಅವರು ಹೇಳುವುದನ್ನು ನಂಬುಗೆಯಿಂದ ಕೇಳುತ್ತಿದ್ದನು. ಅಂತಲೇ ಕಳ್ಳ ಸಾಧುವನ್ನು ಚೆನ್ನಾಗಿ ಸತ್ಕರಿಸಿದನು ಕೂಡಾ.

ಕಳ್ಳ ಸಾಧು ಏನೋ ಧ್ಯಾನಿಸಿ ಆ ಮೇಲೆ ಕಣ್ಣು ತೆರೆದು ಸುಳ್ಳಿನ ಗಡ್ಡವನ್ನು ನೀವಿಕೊಳ್ಳುತ್ತ, "ಅಪ್ಪಾ, ನಿನ್ನ ಸತ್ಕಾರಕ್ಕೆ ತುಂಬಾ ಮೆಚ್ಚಿದ್ದೇನೆ. ಪ್ರತಿಫಲವಾಗಿ ನಿನಗೊಂದು ಉಪಕಾರ ಮಾಡಬೇಕೆಂದಿದೆ. ಬೇಗದಲ್ಲಿ ನಿನ್ನ ಮನೆಯೊಳಗೆ ಕಳ್ಳರು ನುಗ್ಗುತ್ತಾರೆ. ನಿನ್ನ ಧನವನ್ನು ರಕ್ಷಿಸಿಕೊಳ್ಳಬೇಕೆಂದಿದ್ದರೆ ಭದ್ರವಾಗಿ ಯಾವ ಪೆಟ್ಟಿಗೆಯೊಳಗಾದರೂ ಅಡಗಿಸಬೇಕು. ಆ ಧನದ ಪೆಟ್ಟಿಗೆಯನ್ನು ತೋಟದಲ್ಲಿರುವ ಪಾಳುಬಾವಿಯೊಳಗೆ ಅಡಗಿಸಿಡುವುದೇ ಒಳ್ಳೆಯದು. ಒಂದು ತಿಂಗಳ ನಂತರ ಆ ಧನವನ್ನು ತಂದುಕೊಳ್ಳಬಹುದು. ಆ ಮೇಲೆ ಯಾವ ಭಯವೂ ಇಲ್ಲ."

ಸಾಧು ಹೇಳುವಾಗ ಬಂಗಾರಪ್ಪ ಸರಿಸರಿಯೆಂದು ತಲೆಯಾಡಿಸಿದನು. ಸಾಧು ಹೊರಟುಹೋದ ಮೇಲೆ ಹೆಂಡತಿಯೊಂದಿಗೆ ಈ ಸಮಾಚಾರವನ್ನು ಹೇಳಿ, "ಏನು ಮಾಡಬೇಕು"? ಎಂದು ಕೇಳಿದನು. ಸಾಧು ಹೇಳಿದಂತೆಯೇ ಮಾಡಬೇಕೆಂದಳು ಹೆಂಡತಿ.

ಆದರೆ ಬಂಗಾರಪ್ಪನ ಮನೆಯಲ್ಲಿ, ಮನೆಯವರಾರಿಗೂ ತಿಳಿಯದಂತಹ ರಹಸ್ಯ ಭಾಗವು

ಗೋಡೆಯಲ್ಲಿದ್ದಿತು. ಆದುದರಿಂದ ತನ್ನ ಧನವು ಹೋಗುತ್ತದೆಂಬ ಚಿಂತೆ ಅವನಿಗಿರಲಿಲ್ಲ. ಆ ರಹಸ್ಯ ಭಾಗದ ಸಂಗತಿ ಅವನ ಹೆಂಡತಿಗೂ ತಿಳಿಯದು. ಅವನು ತನ್ನ ಧನವನ್ನು ಅಲ್ಲಿ ಅಡಗಿಸಿಟ್ಟು, ಒಂದು ಖಾಲೀ ಪೆಟ್ಟಿಗೆಯನ್ನು ಆ ಪಾಳುಬಾವಿಯೊಳಗೆ ಹಾಕಿ, ಧನವನ್ನೆಲ್ಲ ಪೆಟ್ಟಿಗೆಯಲ್ಲಿಟ್ಟು ಬಾವಿಗೆ ಹಾಕಿದೆನೆಂದು ಹೆಂಡತಿಯೊಂದಿಗೆ ಹೇಳಿದನು.

ಬಂಗಾರಪ್ಪನ ಹೆಂಡತಿಯು ಬಾಯಿ ತೀರಾ ಹರಕು ಬಾಯಿ. ಯಾವ ರಹಸ್ಯವೂ ಅವಳ ನಾಲಗೆಯಲ್ಲಿ ಉಳಿಯುವುದಿಲ್ಲ. ಅವಳು ನೆರೆಮನೆಯವಳೊಂದಿಗೆ ಗುಟ್ಟಾಗಿ ಹೇಳಿದುದರ ಪರಿಣಾಮವಾಗಿ ಅವನು ಹಣವನ್ನು ಬಾವಿಯಲ್ಲಿ ಅಡಗಿಸಿಟ್ಟನೆಂಬ ಸಂಗತಿ ಮರುದಿನವೇ ಊರೊಳಗೆಲ್ಲಾ ಹರಡಿತು.

ಅದರ ಮರುದಿನದ ರಾತ್ರಿಯಲ್ಲಿ ಆ ಸಲಹೆ ಮಾಡಿದ ಕಳ್ಳ ಗೋಡೆಹಾರಿ ಬಂಗಾರಪ್ಪನ ತೋಟದ ಆವರಣದೊಳಗಿದ್ದ ಬಾವಿಯ ಹತ್ತಿರ ಹೋದಾಗ, ಅಲ್ಲಿ ಯಾರೋ ಮೂವರು ಮನುಷ್ಯರು ಕಿಸಪಿಸನೆ ಜಗಳಮಾಡಿಕೊಂಡಿರುವುದನ್ನು ನೋಡಿದನು.

ಆ ಮೂವರು ಕೂಡಾ ಕಳ್ಳರೇ. ಬಂಗಾರಪ್ಪನು ತನ್ನ ಧನವನ್ನು ಆ ಬಾವಿಯಲ್ಲಿ ಅಡಗಿಸಿಟ್ಟ ಸಂಗತಿ ಯನ್ನು ತಿಳಿದು, ಒಬ್ಬನಿಗೆ ಗೊತ್ತಿಲ್ಲದಂತೆ ಒಬ್ಬನು ಬಂದು, ಅಲ್ಲಿ ಒಬ್ಬರನ್ನೊಬ್ಬರು ನೋಡಿ ಜಗಳ ಮಾಡಿಕೊಂಡಿದ್ದರು.

“ನಿಲ್ಲಿಸಿರಿ ನಿಮ್ಮ ಜಗಳ. ಬಂಗಾರಪ್ಪನಿಗೆ ಧನವನ್ನೆಲ್ಲ ಈ ಬಾವಿಯೊಳಗೆ ಅಡಗಿಸಲು ಆಲೋಚನೆ ಹೇಳಿದವನು ನಾನೇ” ಎಂದು ಅಲ್ಲಿಗೆ ಬಂದ ನಾಲ್ಕನೇ ಕಳ್ಳನು ಹೇಳಿದನು.

ಅವನು ಉಳಿದ ಮೂವರಿಗೂ ಜಗಳಾಡುವುದ ರಿಂದ ನಮಗಾರಿಗೂ ಲಾಭವಿಲ್ಲವೆಂಬುದನ್ನು ತಿಳಿಯ ಪಡಿಸಿ, ತಾವು ನಾಲ್ವರೂ ಏನೋ ಒಂದು ಒಪ್ಪಂದಕ್ಕೆ ಬರುವುದು ಒಳ್ಳೆಯದೆಂದು ಬುದ್ಧಿ ಹೇಳಿದನು.



“ಬಂಗಾರಪ್ಪ ಭಾರೀ ಧನಿಕನಾದ್ದರಿಂದ ಬಾವಿ ಯಲ್ಲಿ ಬಹಳ ಹಣ ಹಾಕಿರಬೇಕು. ಅದನ್ನು ನಾವು ಸರಿಸಮವಾಗಿ ಹಂಚಿಕೊಳ್ಳುವುದೇ ಸರಿ” ಎಂದನು ಅವರಲ್ಲಿ ಹಿರಿಯನಾದ ಕಳ್ಳ.

ಇದಕ್ಕೆ ಎಲ್ಲರೂ ಒಪ್ಪಿಕೊಂಡರು. ಆ ಕಳ್ಳರು ಬರುವಾಗ ಹಗ್ಗಗಳನ್ನು ತಂದುಕೊಂಡಿದ್ದರು. ಆ ಹಗ್ಗಗಳಲ್ಲಿ ಒಂದನ್ನು ಬಾವಿಯ ಪಕ್ಕದಲ್ಲಿರುವ ಮರಕ್ಕೆ ಕಟ್ಟಿ, ಎರಡನೇ ಕೊನೆಯನ್ನು ಬಾವಿಯೊಳಗೆ ಇಳಿಸಿ, ಅದನ್ನು ಹಿಡಿದುಕೊಂಡು ಒಬ್ಬ ಕಳ್ಳನು ಬಾವಿಯೊಳಗೆ ಇಳಿದನು.

ಬಾವಿ ತುಂಬಾ ಆಳವಾಗಿದ್ದಿತು. ಅಲ್ಲಿ ನೀರಿನ ಮೇಲೆಯೇ ಒಂದು ಪೆಟ್ಟಿಗೆ ಇರುವುದು ಕಂಡಿತು. ಅದನ್ನು ಹಗ್ಗಕ್ಕೆ ಕಟ್ಟಿಟ್ಟು, ಹಗ್ಗವನ್ನು ಹಿಡಿದು ಕೊಂಡು ಆ ಕಳ್ಳನು ಮೇಲೆ ಬಂದನು. ಆಮೇಲೆ ನಾಲ್ವರು ಕಳ್ಳರೂ ಸೇರಿ, ಹಗ್ಗವನ್ನು ಹಿಡಿದು ಪೆಟ್ಟಿಗೆಯನ್ನು ಮೇಲಕ್ಕೆ ಎಳೆದುಕೊಂಡರು.



ಅಷ್ಟೊಂದು ಭಾರವಾದ ಪೆಟ್ಟಿಗೆ ತೇಲಿಕೊಂಡಿರುವುದನ್ನು ತಿಳಿದು ಕಳ್ಳರಿಗೆ ಆಶ್ಚರ್ಯವಾಗಿತ್ತು.

ಪೆಟ್ಟಿಗೆಯ ಮುಚ್ಚಳಕ್ಕೆ ಬೀಗ ಹಾಕಲ್ಪಟ್ಟಿತ್ತು. ಅವರಲ್ಲಿ ಒಬ್ಬ ಕಳ್ಳನು ಎಂತಹ ಬೀಗವನ್ನಾದರೂ ಅವಲೀಲೆಯಿಂದ ತೆಗೆಯುವಷ್ಟು ಸಮರ್ಥನು. ಅವನು ಕ್ಷಣಮಾತ್ರದಲ್ಲಿ ಬೀಗವನ್ನು ತೆಗೆದುಬಿಟ್ಟನು. ಎಲ್ಲರೂ ಉತ್ಸಾಹದಿಂದ ಪೆಟ್ಟಿಗೆಯ ಮುಚ್ಚಳ ತೆಗೆದ ಮರುಕ್ಷಣದಲ್ಲಿ, ಪೆಟ್ಟಿಗೆಯೊಳಗಿನಿಂದ ಒಂದು ಭೂತವು ನಗುತ್ತಾ ಮೇಲೆದ್ದು ನಿಂತಿತು.

ಭೂತವನ್ನು ನೋಡಿದ ಕೂಡಲೇ ನಾಲ್ವರು ಕಳ್ಳರೂ ಹೆದರಿ ಕಂಗಾಲಾದರು. ಧನದ ಯೋಚನೆ ಗೀತ ಓಡಿಹೋಗುವ ಯೋಚನೆ ಮುಂದೆ ಹಾರಿತು.

"ಭಯಪಡಬೇಡಿ ತಮ್ಮಂದಿರಾ!" ಎಂದು ಅಭಯ ವಾಕ್ಯ ಉಚ್ಚರಿಸಿತು ಭೂತ.

ಭಯವಾದರೂ, ಆಗದೇ ಹೋದರೂ ಕಳ್ಳರಿಗೆ ಓಡಿಹೋಗಲಿಕ್ಕೆ ಮಾತ್ರ ಕಾಲುಗಳಲ್ಲಿ ಶಕ್ತಿ ಇರಲಿಲ್ಲ.

ಭೂತವು ಸಾವಧಾನವಾಗಿ ಹೇಳಿತು, "ಮೊನ್ನೆ ಈ ಬಾವಿಯೊಳಗೆ ಪೆಟ್ಟಿಗೆಯೊಂದು ಬಿದ್ದಿತು. ಚೆನ್ನಾಗಿದೆ ಎಂದುಕೊಂಡು ಬೀಗದ ರಂಧ್ರದಲ್ಲಿ ತೂರಿ ಅದರೊಳಗೆ ಹೊಕ್ಕು ಮಲಗಿದೆ. ಅದು ನನ್ನ ಒಳ್ಳೆಯದಕ್ಕೇ ಆಯಿತು. ನಿಮ್ಮ ಪುಣ್ಯದಿಂದ ಹೊರಗೆ ಬಂದು ಬಿದ್ದೆ. ನನಗೆ ದೊಡ್ಡ ಉಪಕಾರ ಮಾಡಿದಿರಿ. ನಿಮಗೆ ಪ್ರತ್ಯುಪಕಾರ ಮಾಡಬೇಕೆಂದಿದ್ದೇನೆ. ಏನಾಗಬೇಕು ಹೇಳಿರಿ" ಎಂದಿತು ಕಳ್ಳರನ್ನು ಅಪ್ಯಾಯತೆಯಿಂದ ನೋಡುತ್ತ.

ಅದನ್ನು ಕೇಳಿ ಒಬ್ಬ ಕಳ್ಳನಿಗೆ ಧೈರ್ಯ ಬಂತು. ಅವನು ಭೂತವನ್ನು ನೋಡಿ "ಅಸಲು ನೀನು ಯಾರು? ಹೀಗಾಗಲು ಕಾರಣವೇನು? ಬಾವಿಯಲ್ಲಿ ನೀನು ಏಕೆ ಇದ್ದೆ? ಇಷ್ಟು ಕಾಲದಿಂದ ಏಕೆ ಹೊರಗೆ ಬರಲಿಲ್ಲ?" ಎಂದು ಕೇಳಿದನು.

ಈ ಪ್ರಶ್ನೆಗಳನ್ನು ಕೇಳಿದ ಕಳ್ಳನನ್ನು ಭೂತವು ನಗುತ್ತಾ ನೋಡಿ, "ಅದೊಂದು ದೊಡ್ಡ ಕಥೆ. ನಾಲ್ಕೇ ಮಾತಿನಲ್ಲಿ ಹೇಳಿಬಿಡುತ್ತೇನೆ. ಬಂಗಾರಪ್ಪನ ತಾತನಿದ್ದ ಕಾಲದಲ್ಲಿ ನಾವು ಆತನ ನೆರೆಮನೆಯವರಾಗಿದ್ದೆವು. ನನ್ನ ತಾತ ಈ ಬಾವಿಯಲ್ಲಿ ನಿಧಿಯನ್ನು ಅಡಗಿಸಿಟ್ಟಿದ್ದಾನೆಂದು ಸಮಾಚಾರ ಹರಡಿತ್ತು. ಒಂದು ದಿನ ನಾನು ಯಾರಿಗೂ ಗೊತ್ತಾಗದಂತೆ ಆ ನಿಧಿಯನ್ನು ಹುಡುಕಿ ಹಿಡಿಯಲು ಈ ಬಾವಿಯೊಳಗೆ ಹಾರಿದೆ. ಬಾವಿಯ ಅಡಿಯಲ್ಲಿ ಒಂದು ನಿಧಿಯಿದ್ದುದನ್ನು ನೋಡಿದೆ. ಒಂದು ಪೆಟ್ಟಿಗೆಯ ತುಂಬಾ ವಜ್ರಗಳೂ, ವೈಡೂರ್ಯಗಳೂ ಇದ್ದವು. ಆದರೆ ಅವನ್ನೆಲ್ಲಾ ತೆಗೆದುಕೊಂಡು ಹೊರಗೆ ಹೇಗೆ ಬರಲಿ? ನಾನು ಅಲ್ಲಿಯೇ ಸತ್ತು ಭೂತವಾದೆ. ಎಷ್ಟು ಎಗರಾಡಿದರೂ ಹತ್ತು ಅಡಿಗಿಂತ ಹೆಚ್ಚಿಗೆ ಎಗರಲು ಸಾಧ್ಯವಾಗಿಲ್ಲ. ಅನೇಕ ವರ್ಷಗಳಿಂದ ಈ ಬಾವಿಯೊಳಗೆ ಉಳಿದುಬಿಟ್ಟೆ. ಈಗ ನೀವು ಬಂದು ನನ್ನನ್ನು ಹೊರಕ್ಕೆ ಎಳೆದಿದ್ದೀರಿ. ಇದಿಷ್ಟು ನನ್ನ ಕಥೆ" ಎಂದಿತು.

"ನೀನು ನಮಗೆ ಹೇಗೆ ಎಂತಹ ಸಹಾಯ ಮಾಡಲು ಸಾಧ್ಯ ?" ಎಂದು ಒಬ್ಬ ಕಳ್ಳನು ಕೇಳಿದನು.

"ನಿಮಗೆ ಎಲ್ಲಿಂದ ಏನು ಬೇಕಾದರೂ ತಂದು ಕೊಡಬಲ್ಲೆ" ಎಂದಿತು ಭೂತ.

"ಬಾವಿಯೊಳಗಿನಿಂದ ಧನವನ್ನು ತಂದು ಕೊಡುವೆಯಾ ?" ಎಂದು ಒಬ್ಬ ಕಳ್ಳನು ಕೇಳಿದನು.

"ಹಾಗಾದರೆ ನೀವು ಬಾವಿಯೊಳಗಿಳಿದು ಧನ ಇರುವ ಪೆಟ್ಟಿಗೆಯನ್ನು ಹಗ್ಗಕ್ಕೆ ಕಟ್ಟಿರಿ. ಅದು ಎಷ್ಟು ಭಾರವಾಗಿದ್ದರೂ ಸರಿ, ನಾನೊಬ್ಬನೇ ಮೇಲಕ್ಕೆ ಎಳೆದು ಹಾಕುತ್ತೇನೆ. ಬಾವಿಗೆ ಮಾತ್ರ ಇನ್ನು ಹಾರಲಾರೆ." ಎಂದಿತು ಭೂತ.

ಭೂತವು ಹೇಳಿದಂತಹ ನಿಧಿ ಸುಳ್ಳೋ ಸತ್ಯವೋ ತಿಳಿಯಬೇಕೆಂದು ಒಬ್ಬ ಕಳ್ಳನು ಬಾವಿಯೊಳಗೆ ಇಳಿದು ನೀರಿನಲ್ಲಿ ಮುಳುಗಿ ಹುಡುಕಿದನು. ಅವನಿಗೊಂದು ದೊಡ್ಡ ಪೆಟ್ಟಿಗೆ ಸಿಕ್ಕಿತು. ಅದನ್ನು ನೀರಿನ ಮೇಲಕ್ಕೆ ಸ್ವಲ್ಪಮಟ್ಟಿಗೆ ಎತ್ತಿ ಸಾಧ್ಯವಾಗದೆ, ಬೀಗವಿಲ್ಲದ ಮುಚ್ಚಳವನ್ನು ಸ್ವಲ್ಪ ಎತ್ತಿ ಅದರೊಳಗಿನ ಪ್ರಕಾಶವನ್ನು ನೋಡಿದನು. ಅದರೊಳಗೆ ಜಗಜಗನೆ ಹೊಳೆಯುವ ವಜ್ರ ವೈಡೂರ್ಯಗಳಿರುವುದನ್ನು ಅರ್ಥಮಾಡಿಕೊಂಡನು. ಅದನ್ನು ಮೇಲಕ್ಕೆತ್ತಲು ಅವನಿಂದಾಗಲಿಲ್ಲ.

ಕಳ್ಳನು ಹಗ್ಗದ ಸಹಾಯದಿಂದ ಬಾವಿಯೊಳಗಿನಿಂದ ಮೇಲೆ ಬಂದು, ತಾನು ನೋಡಿದುದನ್ನು ಉಳಿದ ಮೂವರು ಕಳ್ಳರಿಗೂ ಹೇಳಿದನು. ಭೂತವು ಎಷ್ಟು ಭಾರವನ್ನಾದರೂ ಮೇಲಕ್ಕೆ ಎಳೆಯುವೆನೆಂದು ಹೇಳುವುದರಿಂದ, ನಾಲ್ವರು ಕಳ್ಳರೂ ಬಾವಿಯೊಳಗಿಳಿದು ಆ ದೊಡ್ಡ ಪೆಟ್ಟಿಗೆಯನ್ನು ನೀರಮೇಲೆ ತಂದು ಹಗ್ಗಕ್ಕೆ ಕಟ್ಟಬೇಕೆಂದುಕೊಂಡು ಬಾವಿಯೊಳಗೆ ಇಳಿಯಲು ಸಿದ್ಧರಾದರು.

ಆಗ ಅವರನ್ನು ನೋಡಿ ಭೂತವು, "ಒಂದು ಮಾತು. ಅದರಲ್ಲಿ ಒಂದೇ ಒಂದು ವಜ್ರವನ್ನು ಮಾರಿದರೆ ತಲಾಂತರಕ್ಕೆ ಸಾಕಾಗುವಷ್ಟು ಹಣ ಬರುತ್ತದೆ. ಹಾಗಿರುವಾಗ ಆ ಪೆಟ್ಟಿಗೆಯೊಳಗಿರುವ ಅಷ್ಟೂ ನಿಧಿಯನ್ನು ಏನು ಮಾಡಿಕೊಳ್ಳುವಿರಿ ?" ಎಂದು ಕೇಳಿತು.




"ಹಣದ ರುಚಿ ನಿನಗೇನು ಗೊತ್ತಿದೆ ? ಅದನ್ನು ಸುಮ್ಮನೆ ನೋಡುತ್ತಾ ಇದ್ದರೆ ಯುಗಾಂತರಗಳನ್ನು ಕ್ಷಣ ಮಾತ್ರದಲ್ಲಿ ಕಳೆಯಬಹುದು" ಎಂದು ನಗುತ್ತಾ ಹೇಳಿದರು ಕಳ್ಳರು.

ಅವರು ನಾಲ್ವರೂ ಬಾವಿಯೊಳಗೆ ಇಳಿದ ಕೂಡಲೇ ಭೂತವು ಹಗ್ಗವನ್ನು ಎಳೆದು ಚೂರು ಚೂರು ಮಾಡಿ ಆಚೆಗೆ ಬಿಸುಟು, "ನೀವು ದುರಾಶೆಯಿಂದ ನನ್ನ ಮಾತು ಲಕ್ಷ್ಯ ಮಾಡಲಿಲ್ಲ, ನನ್ನನ್ನು ನಕ್ಕು ಅವಮಾನ ಪಡಿಸಿದಿರಿ. ಇನ್ನು ನನ್ನ ದಾರಿ ನನಗೆ, ನಿಮ್ಮ ದಾರಿ ನಿಮಗೆ !" ಎಂದು ಹೇಳಿ ಊರ ಕೆರೆಯ ತೀರದಲ್ಲಿರುವ ತಾಳೆಯ ತೋಪಿನ ಕಡೆಗೆ ಹೋಯಿತು.

ಭೂತವು ಮಾಡಿದುದನ್ನು ನೋಡಿ, ಹೇಳಿದು ದನ್ನು ಕೇಳಿ ಬಾವಿಯೊಳಗಿದ್ದ ನಾಲ್ವರು ಕಳ್ಳರೂ ಹೆದರಿ ದಿಕ್ಕುತೋರದೆ ಒದ್ದಾಡ ತೊಡಗಿದರು. ಬಾವಿ ಯಲ್ಲಿ ಅಷ್ಟು ದೊಡ್ಡ ನಿಧಿ ಇರುವುದು ಗೊತ್ತಾ ದರೂ ಅದನ್ನು ಮೇಲಕ್ಕೆ ತಂದು ತೆಗೆದುಕೊಳ್ಳುವ ದಾರಿ ಅವರಿಗೆ ಗೊತ್ತಾಗಲಿಲ್ಲ.

"ನಾವು ಭೂತವು ಹೇಳುವ ಒಳ್ಳೆಯ ಸಲಹೆ ಯನ್ನು ನಿರ್ಲಕ್ಷ್ಯ ಮಾಡಿ ಕಷ್ಟದಲ್ಲಿ ಬಿದ್ದೆವು. ಯಾರಾದರೂ ಬಂದು ಸಹಾಯ ಮಾಡಿದ ಹೊರತು ನಾವು ಮೇಲೆ ಹೋಗಲು ಸಾಧ್ಯವಿಲ್ಲ. ಇಲ್ಲಿಯೇ ಸತ್ತು ನಾವು ಕೂಡಾ ಭೂತಗಳಾಗಿ ಬಿಡುತ್ತೇವೆ" ಎಂದನು ಅವರಲ್ಲಿ ದೊಡ್ಡವನಾದ ಕಳ್ಳ.

ಆ ಕೂಡಲೇ ಬಂಗಾರಪ್ಪನಿಗೆ, ಹಣದ ಪೆಟ್ಟಿಗೆ ಯನ್ನು ಪಾಳು ಬಾವಿಯಲ್ಲಿ ಹಾಕಬೇಕೆಂದು ಹೇಳಿದ ಕಳ್ಳ, ಕಂಠ ಹರಿದು ಹೋಗುವಷ್ಟು ದೊಡ್ಡ ಧ್ವನಿ ಯಿಂದ "ಓಹೋಯ್! ರಕ್ಷಿಸಿರೋಯ್! ಕಾಪಾ ಡ್ರೋಯ್!" ಎಂದು ಕೂಗಲು ತೊಡಗಿದನು. ಅವನೊಂದಿಗೆ ಇತರ ಕಳ್ಳರೂ ಧ್ವನಿ ಸೇರಿಸಿದರು.

ಆ ಕೂಗನ್ನು ಕೇಳಿ ಬಂಗಾರಪ್ಪ ಮಾತ್ರವಲ್ಲದೆ, ನೆರೆಕರೆಹೊರೆಯವರೆಲ್ಲಾ ಬಾವಿಯ ಬಳಿಗೆ ಓಡಿ ಬಂದು, ಒಳಗಿರುವ ಕಳ್ಳರನ್ನು ನೋಡಿ, "ಈ ಹಾಳು ಬಾವಿಗೆ ಏಕೆ ಇಳಿದಿರಿ? ಮೊದಲು ನಿಜ ಸಂಗತಿಯನ್ನು ಹೇಳಿರಿ. ಇಲ್ಲದಿದ್ದರೆ ಮೇಲೆ ಎಳೆಯಲಾರೆವು!" ಎಂದು ಕೂಗಿ ಹೇಳಿದರು.

"ಅಯ್ಯಾ! ನಾವು ಕಳ್ಳರು, ಇಲ್ಲಿ ದೊಡ್ಡ ದೊಂದು ನಿಧಿ ಇರುವ ಪೆಟ್ಟಿಗೆ ಇದೆ. ಬಾವಿಯೊಳಗೆ ದಪ್ಪವಾದ ಹಗ್ಗವನ್ನು ಇಳಿಸಿದರೆ, ಅದನ್ನು ಮೇಲೆ ಎಳೆದುಕೊಳ್ಳಬಹುದು. ನಾವು ತಂದ ಹಗ್ಗವೇ ಅಲ್ಲಿದೆ" ಎಂದರು.

ನಿಧಿಯ ಮಾತು ಕೇಳಿದ ಕೂಡಲೇ ಅಲ್ಲಿದ್ದವರಲ್ಲಿ ಒಬ್ಬನು, ಗ್ರಾಮದ ಪಟೇಲರನ್ನು ಕರೆದುಕೊಂಡು ಬಂದನು. ಅವರ ಮುಂದಾಳ್ತನದಲ್ಲಿ ಕಳ್ಳರೂ ಧನದ ದೊಡ್ಡ ಪೆಟ್ಟಿಗೆಯೂ ಮೇಲಕ್ಕೆ ಬಂದುವು. ಆ ಪೆಟ್ಟಿಗೆಯೊಳಗಿನ ಮಹಾ ನಿಧಿಯನ್ನು ನೋಡಿ ಎಲ್ಲರ ಕಣ್ಣುಗಳೂ ಜಳಜಳವಾದುವು.

ಬಂಗಾರಪ್ಪನು ಅತ್ಯಾಶೆಯಿಂದ ಏನೋ ಹೇಳ ಬೇಕೆಂದಿದ್ದನು, ಅಷ್ಟರೊಳಗೆ ಪಟೇಲರು "ಈ ನಿಧಿ ನಮ್ಮ ಗ್ರಾಮದ ಸೊತ್ತಾಯಿತು. ಇದನ್ನು ಗ್ರಾಮಾಭಿವೃದ್ಧಿಯ ಕಾರ್ಯಗಳಿಗೆ ಉಪಯೋಗಿಸ ಲಾಗುತ್ತದೆ. ಕಳ್ಳರಿಗೆ ಏನು ಶಿಕ್ಷೆ ಕೊಡುವುದೆಂದು ವಿಚಾರಣೆ ನಡೆಸಿ ನಿರ್ಣಯಿಸಬೇಕಾಗಿದೆ. ಈ ನಿಧಿಯನ್ನೂ, ಕಳ್ಳರನ್ನೂ ಗ್ರಾಮದ ಕಚೇರಿಯ ಕಡೆಗೆ ತೆಗೆದುಕೊಂಡು ಬನ್ನಿ" ಎಂದು ಹೇಳಿ ಅಲ್ಲಿಂದ ಹೊರಟರು.






೧೩

[ನರವಾಹನನ ಸೈನ್ಯಕ್ಕೂ ಬೇಡರಿಗೂ ನಡೆದ ಯುದ್ಧವು ಮಹಾ ಬೀಭತ್ಸವಾಯಿತು. ನರವಾಹನನ ಸೈನಿಕರಿಂದ ಬೇಡರೆಲ್ಲಾ ಹತರಾದರು. ಶಿಥಿಲ ದುರ್ಗವು ನರವಾಹನನ ವಶವಾಗಲು, ಶಿವದತ್ತನು ತನ್ನ ಅನುಚರರೊಂದಿಗೆ ಸಮುದ್ರದ ಮೇಲೆ ಪ್ರಯಾಣ ಹೊರಟನು. ಅವರು ಸಮುದ್ರದಲ್ಲಿ ಮಂದರದೇವನನ್ನು ನೋಡಿದರು. ಬಳಿಕ ಒಟ್ಟಾಗಿ, ದೂರದಲ್ಲಿ ಕಂಡ ಬೆಳಕಿನ ಕಡೆಗೆ ದೋಣಿಗಳನ್ನು ಸಾಗಿಸಿದರು.]

**ಸಾ**ಯುವವನು ಹುಲ್ಲು ಕಡ್ಡಿಯನ್ನಾದರೂ ಆಧಾರಕ್ಕೆ ಹಿಡಿಯುವ ಹಾಗೆ, ಆ ಬೆಳಕು ಕಾಣುವ ದಿಕ್ಕಿನ ಮೇಲೆ ಆಶೆಯಿಟ್ಟು ಮಂದರದೇವನೂ ಶಿವದತ್ತನೂ ಸಾಗುತ್ತಿದ್ದರು.

ಕಣ್ಣು ಕುತ್ತಿದರೂ ಕಾಣದಂತಹ ಆ ಕಾರ್ಗತ್ತಲೆಯುಲ್ಲಿ ಅವರ ದೋಣಿಗಳೆರಡೂ ವೇಗವಾಗಿ ಮುಂದೆ ಮುಂದೆ ಹೋಗುತ್ತಿದ್ದುವು. ಮನಸ್ಸುಗಳು ವೇಗವಾಗಿದ್ದುವೇ ಹೊರತು ಅಷ್ಟು ವೇಗವು ದೋಣಿಗಳಿಗೆ ಬರಲಿಲ್ಲ. ಎರಡು ಮೂರು ದಿನಗಳಿಂದ ಮಹಾ ಸಮುದ್ರದ ಮೇಲೆ ನಿದ್ರಾ ಹಾರಗಳಿಲ್ಲದ ಸ್ವಾಮಿ ಭಕ್ತರಾದ ಅವರ ಆರು ಮಂದಿ ಅನುಚರರೂ ಮಂದಶಕ್ತಿಯಿಂದಲೇ ಹುಟ್ಟು ಹಾಕುತ್ತಿದ್ದರು. ಆದುದರಿಂದ ಅವರಿಗೆಲ್ಲ ನಿಮಿಷವು ಯುಗದಂತೆ ಕಾಣುತ್ತಿದ್ದಿತು.

"ಶಿವದತ್ತಾ, ನನ್ನನ್ನು ಹಸಿವೆ ಸುಟ್ಟು ಹಾಕುತ್ತಾ ಇದೆ." ಎಂದು ಮಂದರದೇವನು ಹೇಳಿ, "ನನಗೇ ಹೀಗಿರುವಾಗ ನಮ್ಮ ಅನುಚರರಿಗೆ ಹೇಗಿದ್ದೀತು ? ಅವರ ಪುಣ್ಯದಿಂದಲಾದರೂ ಆ ಬೆಳಕು ಕಾಣುವ ಜಾಗವು ಯಾವುದೋ ಒಂದು ಒಳ್ಳೆಯ ದ್ವೀಪ ವಾಗಿರುವಂತಾಗಲಿ. ಒಂದು ವೇಳೆ ಅದು ಮಾನವರ



ವಾಸಕ್ಕೆ ಯೋಗ್ಯವಲ್ಲದೆ ಹೋದರೆ, ನಾವು ಬಾಣಲೆಯಿಂದ ಒಲೆಗೇ ಬಿದ್ದ ಹಾಗೆ ಆದೀತು. ಹಾಗಾಗದಿರಲಿ !" ಎಂದನು.

" ನಾನೂ ಅದೇ ಯೋಚನೆಯಲ್ಲಿದ್ದೇನೆ. ಹಾಗಾಗದೆಂದೇ ನಂಬೋಣ " ಎಂದು ಶಿವದತ್ತನು ನಕ್ಕನು. "ಎಲ್ಲಿಯೋ ಒಂದು ಕಡೆ ಹೇಗೋ ಹೊಟ್ಟೆ ತುಂಬಿಸಿಕೊಂಡು ಸಾಯುವವರೆಗೆ ಬದುಕುವುದಷ್ಟೇ ನಮ್ಮ ಜೀವಿತದ ಉದ್ದೇಶವೆಂದು ಬ್ರಹ್ಮನು ಬರೆದಿರಲಿಕ್ಕಿಲ್ಲ. ನೀವು ಪದಚ್ಯುತರಾದ ಮರಾಳ ದ್ವೀಪದ ಪ್ರಭುಗಳು. ನಾನು ಮಹಾ ಸೇನಾನಿ ಸಮರಸೇನನ ವಿಶ್ವಾಸದ ಸ್ನೇಹಿತ. ನಾವಿಬ್ಬರೂ ಈಗ ಕ್ರೂರಾತಿಕ್ರೂರನಾದ ಒಬ್ಬ ವ್ಯಕ್ತಿಯ ಕಾರಣದಿಂದ. ಈ ಗಾಢಾಂಧಕಾರದಲ್ಲಿ ಸಮುದ್ರದ ಮೇಲೆ ದಿಕ್ಕಿಲ್ಲದೆ ತಿರುಗುವಂತಾಗಿದೆ. ನಮ್ಮ ಗತಿ ಹೀಗೇ ಇರಲು ಸಾಧ್ಯವೇ ಇಲ್ಲವೆಂದು ಗಟ್ಟಿಯಾಗಿ ನಂಬಿರಿ." ಎಂದನು ಶಿವದತ್ತ.

" ಶಿವದತ್ತಾ, ನಿಮ್ಮ ಅಭಿಪ್ರಾಯ ನನಗೆ ಅರ್ಥವಾಯಿತು " ಎಂದು ಮಂಪರದೇವನು ಮಾತು ನಿಲ್ಲಿಸಿದನು. ಒಮ್ಮೆಗೇ ಅವನಿಗೆ ತನ್ನ ಸಂಗತಿ ನೆನಪಾಯಿತು. ಮರಾಳದ್ವೀಪವೂ, ಅಲ್ಲಿನ ಪ್ರಜೆಗಳೂ, ತಾನು ಅವರನ್ನೆಲ್ಲಾ ಅಗಲಬೇಕಾಗಿಬಂದ ದುರ್ಘಟನೆಗಳೂ ನೆನಪಾಯಿತು. ಅವನು ಹಲ್ಲು ಕಡಿಯುತ್ತ,

" ಶಿವದತ್ತಾ ! ಅದು ಎಷ್ಟು ಭಯಂಕರವಾದ ದ್ವೀಪವಾದರೂ ಇನ್ನು ಹೆದರಲಾರೆನು. ನನ್ನ ದೇಹದಲ್ಲಿ ಜೀವವಿರುವವರೆಗೂ ನರವಾಹನನು ಮಾಡಿದ ದ್ರೋಹವನ್ನು ಮರೆಯಲಾರೆನು. ಮತ್ತೆ ನನ್ನ ರಾಜ್ಯವನ್ನು ಪಡೆಯಲು ಸಾಧ್ಯವಾದಷ್ಟು ಪ್ರಯತ್ನ ಮಾಡುವೆನು. ಎಂದಿಗೂ ಅವನನ್ನು ಬಿಡಲಾರೆ " ಎಂದನು.

ಅದನ್ನು ಕೇಳಿ ಶಿವದತ್ತನು ಸಂತೋಷದಿಂದ, " ಒಳ್ಳೆಯದು ಪ್ರಭೂ. ದುಷ್ಟರ ವಿಜಯವು ತಾತ್ಕಾಲಿಕವಷ್ಟೇ " ಎಂದನು. ಅದೇ ಸಮಯದಲ್ಲಿ ದೋಣಿ ನಡೆಸುವವರು ಒಮ್ಮೆಲೇ ಗಾಬರಿಯಾದಂತೆ ಕೂಗಿದರು.

" ಅಯ್ಯಯ್ಯೋ ! ಈ ಪ್ರಾಂತವೆಲ್ಲಾ ಬಂಡೆಗಲ್ಲುಗಳ ಮಯ ! ಯಾವುದೋ ದ್ವೀಪದ ಬಳಿಗೇನೋ ಬಂದೆವು. ಈ ಕತ್ತಲೆಯಲ್ಲಿ ಈ ಬಂಡೆಗಳನ್ನು ತಪ್ಪಿಸಿಕೊಂಡು ದೋಣಿ ನಡೆಸಲು ಸಾಧ್ಯವೇ ಇಲ್ಲ!" ಎಂದರು ಅನುಚರರು.

" ಇರುವಲ್ಲೇ, ನಿಲ್ಲಿಸಿರಿ !" ಎಂದು ಶಿವದತ್ತನು ಅವರಿಗೆ ಆಜ್ಞೆಮಾಡಿ, ಕಣ್ಣು ಕಿರುಟಿಸಿ ಸೂಕ್ಷ್ಮವಾಗಿ ಅತ್ತ ನೋಡಿದನು. ಸಮುದ್ರದ ತೀರವಲ್ಲೆಲ್ಲಾ ಕತ್ತಲೆಯ ರಾಶಿಗಳಂತೆ ಗುಂಪುಗುಂಪಾಗಿ ಬೆಳೆದ ಮರಗಳು ಕಾಣಿಸಿದುವು. ತಾವು ಒಂದಾನೊಂದು ದ್ವೀಪದ ತೀರಕ್ಕೆ ಬಂದಿದ್ದೇವೆನ್ನಲು ಸಂದೇಹವಿರಲಿಲ್ಲ. ಈ ಮೊದಲು ಕಂಡ ಬೆಳಕು ಈಗ ಎಲ್ಲಿಯೂ



ಕಾಣಲಿಲ್ಲ. ಕತ್ತಲೆಯಲ್ಲಿ ಬಂಡೆಗಳನ್ನು ತಪ್ಪಿಸಿಕೊಂಡು ದೋಣಿಗಳನ್ನು ನಡೆಸುವುದು ಸಾಧ್ಯವಿಲ್ಲವೆಂಬುದು ನಿಜವೇ.

ಸುತ್ತುಮುತ್ತಲೂ ಸಮುದ್ರದ ತೆರೆಗಳ ಮೇಲೆ ತಲೆಯೆತ್ತಿ ನೋಡುವ ಎಷ್ಟೋ ಬಂಡೇ ಕಲ್ಲುಗಳು. ತೆರೆಗಳ ಹೊಡೆತದಿಂದ ದೋಣಿಗಳು ಅವುಗಳಲ್ಲಿ ಯಾವುದೊಂದಕ್ಕೆ ತಾಗಿದರೂ ಒಡೆದು ಚೂರಾಗದೆ ಹೋಗವು!

"ಮಂದರದೇವ ಮಹಾರಾಜಾ! ಮುಗಿಯಿತು ನಮ್ಮ ಸಮುದ್ರಯಾನ!" ಎಂದನು ಶಿವದತ್ತ. ಮಂದರದೇವನು ಏನೂ ಹೇಳದೆ ಶಿವದತ್ತನ ಹಾಗೆಯೇ ನೋಡುತ್ತಿದ್ದನು. ಶಿವದತ್ತನು ಮುಂದುವರಿಸುತ್ತ. "ಆಶೆ ತೋರಿಸುವ ಹಾಗೆ ಅಲ್ಲಿ ಮರಗಳಿಂದ ತುಂಬಿದ ತೀರವೇನೋ ಕಾಣುತ್ತಾ ಇದೆ. ಇಲ್ಲಿ ಸಮುದ್ರದಲ್ಲಿ ತಲೆಯೆತ್ತಿರುವ ಪಿಶಾಚಿ ಬಂಡೆಗಳನ್ನು ನೋಡಿರಿ. ಅವುಗಳನ್ನು ತಪ್ಪಿಸಿಕೊಂಡು ದೋಣಿಗಳನ್ನು ತೀರಕ್ಕೆ ಒಯ್ಯುವುದು ಸಾಧ್ಯವೆನ್ನುವಿರಾ?" ಎಂದನು.

"ಅಂದರೆ ಸೂರ್ಯೋದಯವಾಗುವ ವರೆಗೂ ಇಲ್ಲಿಯೇ ತೇಲಾಡಿಕೊಂಡಿರೋಣವೆಂದು ಅಭಿಪ್ರಾಯ ಪಡುವಿರಾ ಶಿವದತ್ತಾ" ಎಂದು ಮಂದರದೇವನ ಬಾಯಿಯಿಂದ ಪ್ರಶ್ನೆ ಹೊರಟಿತು.

"ಅದು ಅಷ್ಟು ಒಳ್ಳೆಯದಲ್ಲವೆಂದೇ ನನಗೆ ತೋರುತ್ತದೆ. ಒಂದು ವೇಳೆ ಈ ದ್ವೀಪವು ಯಾವ ಅನಾಗರಿಕ ಮಾನವ ಪ್ರಾಣಿಗಳ ವಾಸಸ್ಥಳವಾಗಿದ್ದು ಬಿಟ್ಟರೆ, ಹಗಲು ಹೊತ್ತಿನಲ್ಲಿ ನಮ್ಮನ್ನು ನೋಡಿ ಒಮ್ಮೆಗೇ ಬೇಟೆಯಾಡಿ ಬಿಡಲೂಬಹುದು. ಆದುದರಿಂದ ನಾವು ಕತ್ತಲೆ ಇರುವಾಗಲೇ ಆ ದ್ವೀಪವನ್ನು ಸೇರಿ, ಅಲ್ಲಿಯ ಪರಿಸ್ಥಿತಿ ಎಂತಹುದೆಂಬುದನ್ನು ತಿಳಿದುಕೊಳ್ಳುವುದು ಒಳ್ಳೆಯದು. ಒಂದು ವೇಳೆ ಯಾರಾದರೂ ನಮ್ಮನ್ನು ಇದಿರಿಸಿ ಬಂದರೆ ಕತ್ತಲೆಯಲ್ಲಿ ತಪ್ಪಿಸಿಕೊಳ್ಳುವುದು ಸುಲಭವಾಗುತ್ತದೆ" ಎಂದನು ಶಿವದತ್ತ.

ಶಿವದತ್ತನ ಅಭಿಪ್ರಾಯವು ಮಂದರದೇವನಿಗೂ ಹೌದೆನಿಸಿತು. ಅವರ ಅಪ್ಪಣೆಯಂತೆ ಎರಡು ದೋಣಿಗಳನ್ನು ನೀರಿನಲ್ಲಿ ಮುಳುಗಿರುವ ಶಿಲೆಗಳಿಗೆ ಕಟ್ಟಿ ನಿಲ್ಲಿಸಲ್ಪಟ್ಟವು. ಇನ್ನು ತೀರವನ್ನು ಸೇರಬೇಕಾದರೆ ಸುಮಾರು ಒಂದು ಕೂಗಳತೆಯಷ್ಟು ದೂರದ ವರೆಗೆ ಸಮುದ್ರದಲ್ಲಿ ಈಜಿಕೊಂಡು ಹೋಗಬೇಕಾಗಿದ್ದಿತು. ದೊಡ್ಡ ದೊಡ್ಡ ತೆರೆಗಳು ಕುಣಿದಾಡಿಕೊಂಡಿರುವುದರಿಂದ ತೀರವನ್ನು ಸೇರುವುದು ಬಹು ದೊಡ್ಡ ಸಾಹಸ ಕಾರ್ಯದಂತೆ ಕಾಣುತ್ತಿದ್ದಿತು.

ಎಲ್ಲರೂ ಪರಸ್ಪರ ಏಕಾಭಿಪ್ರಾಯಕ್ಕೆ ಬಂದು, ಮುಖ್ಯ ಮುಖ್ಯ ಅಂಗಿ ಬಟ್ಟೆಗಳನ್ನು ತಲೆಗೆ ಕಟ್ಟಿಕೊಂಡರು. ಆಯುಧಗಳನ್ನು ಶರೀರದ ಮೇಲೆ ಬಿಗಿದುಕೊಂಡರು. ಆ ಮೇಲೆ ಎಲ್ಲರೂ ಟೊಂಕ ಕಟ್ಟಿಕೊಂಡು ಜಲದೇವಿಯೇ ಗತಿಯೆಂದು ಸಾಷ್ಟಾಂಗ

ರೂಪವಲ್ಲಿ ಕೈ ಚಾಚಿ ಮುಗಿದು ತಲೆಯೆತ್ತಿ ನೀರಿಗೆ ಈಜಲು ಬಿದ್ದರು. ದೊಡ್ಡ ದೊಡ್ಡ ಅಲೆಗಳು ಅವರನ್ನು ಅಲ್ಲಲ್ಲಿ ಕಲ್ಲುಗಳ ಮೇಲೆ ಹಾಯಿಸುತ್ತಿದ್ದುವು. ಬಹಳ ಜಾಣತನದಿಂದ, ಮುಂದೆ ಸಾಗುತ್ತ, ಅಂತೂ ಇಂತೂ ತೀರದ ಮಣ್ಣಿನಲ್ಲಿ ಹೋಗಿ ಬಿದ್ದು ಭೂದೇವಿಯನ್ನು ಅಪ್ಪಿಕೊಂಡರು. ಆಮೇಲೆ ನೆನೆದ ಒಳದುಸ್ತನ್ನು ತೆಗೆದು ಹಿಂಡಿ, ಮೈ ಒರೆಸಿಕೊಂಡು. ಕಟ್ಟಿ ಸುತ್ತಿ ಹಿಡಿದುಕೊಂಡು ಬಂದಿದ್ದ ಬಟ್ಟೆಗಳನ್ನು ಬಿಚ್ಚಿ. ಅವೇ ಒಣ ಬಟ್ಟೆಗಳೆಂದುಕೊಂಡು ಧರಿಸಿದರು. ಅವರೆಲ್ಲರ ಶರೀರಗಳೂ ಚಳಿಯಿಂದ ಗದಗದಿಸಿಕೊಂಡಿದ್ದುವು.

"ಅಬ್ಬಬ್ಬ! ಈ ಚಳಿಯ ಕಾಟದಿಂದ ತಪ್ಪಿಸಿಕೊಳ್ಳಬೇಕಾದರೆ ಹೇಗಾದರೂ ಬೆಂಕಿ ಉರಿಸಲೇಬೇಕು. ಸ್ವಲ್ಪ ಒಣಪುರುಲೆಗಳನ್ನು ಕೂಡಿಹಾಕಲೇ ?" ಎಂದು ಒಬ್ಬ ಸೈನಿಕನು ಶಿವದತ್ತನನ್ನು ಕೇಳಿದನು.

"ಹಾಗೆಯೇ ಮಾಡಿರಿ. ಒಂದು ವೇಳೆ ಈ ದ್ವೀಪದಲ್ಲಿ ಯಾವ ನರಮಾಂಸ ಭಕ್ಷಕರೋ ಇದ್ದರೆ, ಆ ಬೆಂಕಿಯೇ ಅವರನ್ನು ಆಕರ್ಷಿಸಿ. ಓಡಿ ಬಂದು ನಮ್ಮನ್ನೆಲ್ಲ ಅದೇ ಬೆಂಕಿಯಲ್ಲಿ ಹಾಕಿ ಸುಟ್ಟು ತಿಂದಾರು ಎಂಬ ಎಚ್ಚರಿಕೆಯೂ ಇರಲಿ!" ಎಂದು ಹೇಳಿ ಶಿವದತ್ತನು ನಕ್ಕನು.

"ಹಾಗೆ ನಮ್ಮನ್ನು ಗಬ್ಬಕ್ಕನೆ ಹಿಡಿದೆತ್ತಿ ಸುಟ್ಟು ಹಾಕಲು ನಾವು ಗೆಡ್ಡೆಗೆಣಸುಗಳೇನು? ನಮ್ಮಲ್ಲಿರುವ ಹರಿತವಾದ ಕತ್ತಿಗಳೂ. ಬಿಲ್ಲಂಬುಗಳೂ..." ಎಂದು ಮಂದರದೇವನು ಹೇಳುತ್ತಿರಲು, ಶಿವದತ್ತನು ನಡುವೆ ಬಾಯಿ ಹಾಕಿ. "ಮಂದರದೇವ ಪ್ರಭೂ, ನಿಮಗೆ ಇಂತಹ ದ್ವೀಪಗಳ ಸಮಾಚಾರ ತಿಳಿಯದಂತಿದೆ. ಕೆಲವು ಅನಾಗರಿಕ ಆಟವಿಕರ ಸಂಗತಿ ಕೇಳಿರಲಾರಿರಿ. ಅವರಿಗೆ ಭಯವೆಂದರೇನೆಂಬುದೇ ತಿಳಿಯದು. ವಿಚಾರ ಸಾಚಾರಗಳನ್ನೂ ಅರಿಯದ ಮೂಢರು. ನಿಮ್ಮ ಕತ್ತಿಯಿಂದ ಒಬ್ಬಿಬ್ಬರು ತುಂಡಾಗಿ ಬಿದ್ದಕೂಡಲೇ ಹತ್ತೆಂಟು ಮಂದಿ ಒಮ್ಮೆಗೇ ಹಾರಿಬರುತ್ತಾರೆ. ತಿನ್ನುವುದೂ, ಆ ಪ್ರಯತ್ನದಲ್ಲಿ ಸಾಯುವುದೂ ಇವೆರಡೇ ಅವರಿಗೆ ಗೊತ್ತು"



ಎಂದನು. ಅಷ್ಟರಲ್ಲಿ ಸೈನಿಕರು ಒಣಪುರುಲೆಗಳನ್ನು ಸೇರಿಸಿ ಚಕಮುಕಿ ಹೊಡೆದು ಬೆಂಕಿ ಉರಿಸಿದರು. ಕೂಡಲೇ ಅವರೆಲ್ಲ ಅದರ ಸುತ್ತಲೂ ಸೇರಿ ಚಳಿಕಾಯಿಸಿಕೊಳ್ಳಲು ಕುಳಿತರು. ಇನ್ನೂ ಪ್ರಶ್ನೆಗೆ ತಕ್ಕ ಉತ್ತರ ಸಿಗಲಿಲ್ಲ. ಅದು ಎಂತಹ ದ್ವೀಪವೋ ? ಮುಂದೆ ಎಂತಹ ಗಂಡಾಂತರಗಳಿಗೆ ತಲೆ ಕೊಡಬೇಕಾಗುವುದೋ ಎಂದು ಶಿವದತ್ತನು ಆಲೋಚಿಸಿಕೊಂಡೇ ಇದ್ದನು.

ಮಹಾರಾಜನಾಗಿಯೇ ಕಾಲ ಕಳೆದವನಾದ ಮಂದರದೇವನಿಗೆ ಅಷ್ಟೇನೂ ಅಲೋಚನೆ ಇರಲಿಲ್ಲ. ಉದ್ವೇಗಕ್ಕೊಳಗಾಗದೆ ಬೆಳಗಾದ ಮೇಲೆ ಈ ದ್ವೀಪದ ಸಮಾಚಾರವನ್ನು ಕುರಿತು ನೋಡಬಹುದೆಂದುಕೊಂಡು, ಬೇಗ ಬೆಳಗಾಗುವುದನ್ನೇ ನಿರೀಕ್ಷಿಸಿಕೊಂಡಿದ್ದನು.

ಇದ್ದಕ್ಕಿದ್ದ ಹಾಗೆ ಎಲ್ಲಿಯೋ ನಾಯಿ ಬೊಗಳಿದ ಹಾಗೆ ಒಂದು ಶಬ್ದ ಕೇಳಿತು. ಶಿವದತ್ತ ಮೊದಲಾದವರು ಒಮ್ಮೆಗೇ ಮೆಟ್ಟಿಬಿದ್ದು ಆ ಕಡೆಗೇ ಲಕ್ಷ್ಯ ಗೊಟ್ಟರು. ಒಂದೇಸಾರಿ "ಬೊಕ್" ಎಂಬ ಶಬ್ದ ಕೇಳಿತೇಹೊರತು, ಆಮೇಲೆ ಏನೂ ಕೇಳಿಸಲಿಲ್ಲ.

ಮಂದರದೇವನು ಸ್ವಲ್ಪ ಹೊತ್ತು ಆ ಕಡೆಗೇ ನೋಡಿ, ಆಮೇಲೆ ಶಿವದತ್ತನೊಂದಿಗೆ, "ಅಲ್ಲ ಶಿವದತ್ತಾ, ನಾವು ಹೆದರಿಕೊಂಡ ಹಾಗೆ ಇದು ಅನಾಗರಿಕ ಜಾತಿಯ ಭಯಂಕರ ಮನುಷ್ಯರಿರುವ ದ್ವೀಪವಲ್ಲವೆಂದು ತೋರುತ್ತದೆ. ನಾಯಿಯನ್ನು ಪಳಗಿಸಿ ಉಪಯೋಗಿಸಿಕೊಳ್ಳುವ ಪದ್ಧತಿ ನಾಗರಿಕರಿಗಷ್ಟೇ ಗೊತ್ತು" ಎಂದನು.

"ಮಂದರದೇವ ಪ್ರಭೂ! ನೀವು ಬಹಳ ತಪ್ಪಾಗಿ ತಿಳಿದಿದ್ದೀರಿ. ನಾನು ನನ್ನ ಕಣ್ಣುಗಳಿಂದ ಚಿರತೆಗಳನ್ನು ಪಳಗಿಸಿ ಬೇಟೆಗೆ ಉಪಯೋಗಿಸುವ ಅನೇಕ ಮಂದಿ ಆಟವಿಕರನ್ನು ನೋಡಿದ್ದೇನೆ. ಆ ಸಂಗತಿಯನ್ನು ಈ ಮೊದಲೇ ನಿಮಗೆ ಹೇಳಿದ್ದೇನಷ್ಟೆ ? ಈಗ ನಮ್ಮ ಕಿವಿಗೆ ಬಿದ್ದ ನಾಯಿಯ ಹಾಗಿನ ಕೂಗು ಯಾವ ಕಾಡು ನಾಯಿಯದಾದರೂ ಆಗಿರಬಹುದು. ನಾವು ತುಂಬ ಎಚ್ಚರಿಕೆಯಲ್ಲಿರಬೇಕು. ಬೆಳಗಾದ ಕೂಡಲೇ..."





ಎಂದು ಶಿವದತ್ತನು ಮಾತು ಪೂರ್ತಿ ಮಾಡುವುದಕ್ಕೆ ಮೊದಲೇ, ಮರದ ಕೊಂಬೆಗಳಿಗೆ ರಾಚಿಕೊಂಡು ದೊಡ್ಡದೊಂದು ಕಲ್ಲು ಹಾರಿಬಂದು ಚೆಂತಿಯ ಮುಂದೆ ಕುಳಿತಿದ್ದ ಸೈನಿಕನ ಬೆನ್ನಿನ ಬದಿಗೆ ತಾಗಿ ಕೆಳಗೆ ಬಿತ್ತು. ಸೈನಿಕನು ಸಾಯುವ ಹಾಗೆ ಕೂಗಿ ಕವುಚಿ ಬಿದ್ದನು. ಕೂಡಲೇ ಮಂದರ ದೇವನು ಬಿಲ್ಲಿಗೆ ಬಾಣ ಹೂಡಿ ಕಲ್ಲು ಬಂದ ದಿಕ್ಕಿಗೆ ಪ್ರಯೋಗಿಸಿದನು.

ಮರುಕ್ಷಣದಲ್ಲಿ ಶಿವದತ್ತನಿಗೆ ಕೂಡಾ ಹೆದರಿಕೆ ಯಾಗುವಂತಹ ವಿಕೃತವಾದೊಂದು ಕರ್ಕಶವಾದ ಮಾನವ ಕಂಠದಿಂದ ಹೊರಟ ಆರ್ತನಾದವು ಕಿವಿ ಗಳನ್ನು ಕೊರೆಯುವಂತೆ ಕೇಳಿತು. ಎಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡುತ್ತ ಬೆರಗಾಗಿ ಬೆಪ್ಪು ಮೂಕರಾದರು.

ಹಾಗಾದರೆ ಈ ದ್ವೀಪವು ಬರಿಯ ನಿರ್ಜನ ಪ್ರದೇಶವಂತೂ ಅಲ್ಲ. ಕ್ರೂರಗುಣದ ಯಾವುದೋ ಮಾನವಜಾತಿ ಇಲ್ಲಿದೆ. ಕೇಳಿಸಿದ ಆರ್ತನಾದವು ಮಾನವ ಕಂಠದಿಂದ ಹೊರಟುದೆನ್ನಲು ಯಾವ ಸಂದೇಹವೂ ಇಲ್ಲ.

ಮಂದರದೇವನು ಕತ್ತಿ ಹಿರಿದು ಮುಂದಕ್ಕೆ ಅಡಿ ತೆಗೆದಿಟ್ಟು. ಸೈನಿಕರನ್ನು ತನ್ನ ಹಿಂದೆ ಬರುವಂತೆ ಸಂಜ್ಞೆ ಮಾಡಿದನು. ಆಗ ಶಿವದತ್ತನು ಆತನನ್ನು ತಡೆದು, "ಮಂದರದೇವ ಪ್ರಭೂ! ದುಡುಕಬೇಡಿರಿ! ನೀವು ಹೊರಟ ಕೆಲಸವು ತುಂಬಾ ಗಂಡಾಂತರಕಾರಿ. ಈ ಕಗ್ಗತ್ತಲೆಯ ರಾತ್ರಿಯಲ್ಲಿ ಈ ದ್ವೀಪಕ್ಕೆ ಹೊಸಬ ರಾಗಿ ನಾವಿದ್ದೇವೆ. ಇಲ್ಲಿನವರು ನಿಶಾಚರರಾಗಿದ್ದರೆ ಕತ್ತಲೆಯಲ್ಲಿಯೂ ನೋಡುವವರಾಗಿದ್ದಾರು. ಯಾವ ಮರದಲ್ಲಿ, ಯಾವ ಪೊದರುಗಳ ಹಿಂದೆ ಯಾವ ಘಾತಪ್ರ ಹೊಂಚಿಕೊಂಡಿದೆಯೋ ನಾವು ಕಾಣೆವು. ಅದ್ದರಿಂದ ನಾವಾಗಿ ದುಡುಕಿ ಏನೂ ಮಾಡುವುದು ಸರಿಯಲ್ಲದೆಂದೇ ನನ್ನ ಅಭಿಪ್ರಾಯ." ಎಂದನು.

"ಕಲ್ಲು ಬಿಸುಟವನು ಮನುಷ್ಯನೆಂದು ತಿಳಿಯಿ ತಷ್ಟೆ? ಅವನನ್ನೇ ನಾನು ಬಾಣದಿಂದ ಗಾಯ ಪಡಿಸಿದೆನೆಂಬೂ ಆರ್ತನಾದದಿಂದ ಗೊತ್ತಾಗುತ್ತದೆ. ಒಂದು ವೇಳೆ ಅವನು ಇನ್ನೂ ಬದುಕಿಕೊಂಡಿದ್ದರೆ, ಅವನಿಂದ ನಾವು ಈ ದ್ವೀಪದ ಸಮಾಚಾರವನ್ನು ತಿಳಿದುಕೊಳ್ಳಬಹುದಷ್ಟೇ? ಹೀಗೆ ಮಾಡುವುದು ಒಳ್ಳೆಯದಲ್ಲವೆನ್ನುವಿರಾ?" ಎಂದು ಮಂದರದೇವನು ತನ್ನ ಅಭಿಪ್ರಾಯವನ್ನು ಸೂಚಿಸಿದನು.

ಶಿವದತ್ತನು ಮಂದರದೇವನ ಅಭಿಪ್ರಾಯ ದೊಂದಿಗೆ ವಿರೋಧಿಸಲಿಲ್ಲ. "ಈಗಿನ ಸ್ಥಿತಿಯಲ್ಲಿ ನಿಮ್ಮ ಬಾಣಕ್ಕೆ ಗುರಿಯಾದವನು ಸತ್ತನೋ. ಅಥವಾ ಗಾಯಗೊಂಡು ಓಡಿ ಹೋದನೋ ನಮಗೆ ಗೊತ್ತಿಲ್ಲ. ಒಮ್ಮೆ ಕೇಳಿಸಿದ ಆರ್ತನಾದವು ಮತ್ತೆ ಕೇಳಿಸಲೇ ಇಲ್ಲವೆಂಬುದನ್ನು ಯೋಚಿಸಬೇಕು. ಅಲ್ಲೇ ಬಿದ್ದಿರುವವನಾದರೆ ಇನ್ನೂ ಆರ್ತನಾದ ಕೇಳಿಬರ ಬೇಕಿತ್ತು," ಎಂದು ಶಿವದತ್ತನು ಹೇಳಲು, "ಒಂದೇ

ಆರ್ತನಾದದಿಂದ ಅವನ ಪ್ರಾಣಪಕ್ಷಿಹಾರಿರಲೂ ಬಹುದಷ್ಟೆ ? " ಎಂದನು ಮಂದರದೇವ.

" ಅದು ನಮಗೆ ಖಚಿತವಾಗದಿರುವಾಗ, ಗಾಯ ಗೊಂಡವನು ಓಡಿ ಹೋಗಿ ಮತ್ತೆ ಕೆಲವರನ್ನು ಕರೆದುಕೊಂಡು ಬರಲೂಬಹುದು. ಯಾವುದಕ್ಕೂ ಬೆಳಗಾಗುವವರೆಗೂ ನಾವು ಕಣ್ಣಿಗೆ ರೆಪ್ಪೆ ಹಚ್ಚದೆ ತಕ್ಕಷ್ಟು ಎಚ್ಚರಿಕೆಯಲ್ಲಿ ನಿರೀಕ್ಷಿಸುವುದೇ ಒಳ್ಳೇದು " ಎಂದನು ಶಿವದತ್ತ.

" ಹೌದು. ನಿಜವೇ " ಎಂದು ಮಂದರದೇವನು ಕತ್ತಿಯನ್ನು ಕೆಳಗಿಳಿಸಿದನು. ಎಲ್ಲರೂ ಬೆಂಕಿಯ ಸುತ್ತಲೂ ಮತ್ತೆ ಕುಳಿತರು. ಮೆಲ್ಲಮೆಲ್ಲನೆ ನಿದ್ರೆಯು ಮತ್ತು ಅವರನ್ನು ತೂಕಡಿಸ ತೊಡಗಿತು. ಶಿವದತ್ತನೂ ಒಬ್ಬ ಸೈನಿಕನೂ ಉಳಿದವರನ್ನು ನಿದ್ರಿಸಲು ಹೇಳಿ ತಾವಿಬ್ಬರೂ ಎಚ್ಚರಿಕೆಯಿಂದ ಕಾವಲು ಕುಳಿತರು.

ಪೂರ್ವಾಕಾಶದಲ್ಲಿ ರಕ್ತಕಾಂತಿಯಿಂದ ಅರುಣೋದಯವು ಪಸರಿಸಿಕೊಂಡು ಬಂತು. ಪುಣ್ಯವಶಾತ್ ಅದುವರೆಗೆ ಮತ್ತಾವ ದುರ್ಘಟನೆಯೂ ನಡೆಯಲಿಲ್ಲ. ಚೆನ್ನಾಗಿ ಬೆಳಗಾದ ಕೂಡಲೇ ಮಂದರದೇವನೂ ಉಳಿದವರೂ ಕಣ್ಣು ಬಿಡಿಸಿ ಎದ್ದರು. ಆಗ ತಾವು ಕುಳಿತಿರುವ ಪ್ರಾಂತವು ಒಂದು ದಟ್ಟವಾದ ಕೀಕಾರಣ್ಯವೆಂದು ಅವರಿಗೆ ಗೊತ್ತಾಯಿತು. ಆಕಾಶವನ್ನು ತಿವಿದು ತೂರಿಕೊಂಡು ಮೇಲೆ ಹೋದಂತಹ ದೊಡ್ಡ ದೊಡ್ಡ ಮರಗಳು, ಅವುಗಳ ಬುಡಗಳನ್ನು ಮುಚ್ಚಿ ಹಾಕಿಕೊಂಡು ಭಾರಿ ಭಾರಿ ಪೊದರುಗಳು, ಸಣ್ಣ ಸಣ್ಣ ಮರಗಳು, ಅವುಗಳನ್ನು ಬಳಸಿಕೊಂಡ ಬಗೆಬಗೆಯ ಬಳ್ಳಿಗಳು, ಅವುಗಳ ಮೇಲೆ ಎಗರುತ್ತ ಹಾರುತ್ತ, ಉಯ್ಯಾಲಾಡುತ್ತ ಸ್ವೇಚ್ಛಾಲೀಲೆಯಲ್ಲಿರುವ ಕೋತಿಗಳು. ಚಿತ್ರವಿಚಿತ್ರವಾದ ಪಕ್ಷಿಗಳು, ಹೀಗೆ ಎಲ್ಲವೂ ಭಯೋತ್ಪಾದಕಗಳಾಗಿಯೇ ಕಂಡುವು.

" ಮಂದರದೇವ ಪ್ರಭೂ! ಬೆಂಕಿ ಇದ್ದುದರಿಂದಲೇ ನಾವು ಸುರಕ್ಷಿತವಾಗಿದ್ದೇವೆಂದು ಕಾಣುತ್ತದೆ. ಇನ್ನೀಗ ನಾವು ರಾತ್ರಿಯಲ್ಲಿ ಬಿಟ್ಟ ಕೆಲಸವನ್ನು ಉಪಕ್ರಮಿಸಬಹುದು. ಕೆಲಸ ಮಾಡದೆ ಸುಮ್ಮನಿರಲು ಹೇಗೂ ನಮ್ಮಿಂದಾಗದಷ್ಟೆ ? ನಿಮ್ಮ ಬಾಣವು ಯಾವ ದಿಕ್ಕಿಗೆ ಹೋಗಿ ಆ ವಿಕೃತ ಸ್ವರವನ್ನು ಹೊರಡಿಸಿತೋ ನಿಮಗೆ ಗೊತ್ತಿರಬಹುದೆಂದು ಎಣಿಸುತ್ತೇನೆ " ಎಂದು ಶಿವದತ್ತನು ಎದ್ದನು.

" ಗೊತ್ತಿದೆ " ಎಂದು ಮಂದರದೇವನು ಮುಂದೆ ನಡೆದನು. ಬಳ್ಳಿಗಳನ್ನೂ, ಪೊದರುಗಳನ್ನೂ ತಪ್ಪಿಸಿಕೊಳ್ಳುತ್ತ, ಅವರು ಸುಮಾರು ನೂರು ಗಜ ದೂರ ಹೋದರು. ಆ ಸ್ಥಳದಲ್ಲಿ ಹಸಿರೆಲೆಗಳಮೇಲೆ ನೆತ್ತರಿನ ಕಲೆಗಳು ಇನ್ನೂ ಹಸಿಯಾಗಿರುವುದನ್ನು ನೋಡಿ, ಬೆರಗಾಗಿ ನಿಂತರು.

—(ಇನ್ನೂ ಇದೆ)





# ಉತ್ತಮ ಸೇನಾನಿ

ಮುಟ್ಟಿದ್ದನ್ನು ಮುಗಿಸದೆ ಬಿಡೆನೆಂದು ಹಟತೊಟ್ಟ ರಾಜಾ ತಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ಅದನ್ನು ತನ್ನ ಹೆಗಲಿನ ಮೇಲೆ ಹಾಕಿಕೊಂಡು, ಎಂದಿನಂತೆ ಮೌನವಾಗಿ ಮತ್ತೆ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿ ಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲ್ಲೈ ಮಹರಾಜನೇ, ನಿನ್ನ ಈ ಹಟವನ್ನೂ, ಕಾರ್ಯಸಾಧನೆಯಲ್ಲಿ ನಿನಗಿರುವ ದೀಕ್ಷೆಯನ್ನೂ ನೋಡುತ್ತಿದ್ದರೆ, ಯಾವನೋ ನಿನಗಿಂತಲೂ ದೊಡ್ಡ ಜ್ಞಾನ ಪಂಡಿತನು ನಿನ್ನಿಂದ ಈ ಕೆಲಸ ಮಾಡಿಸುವನೋ ಅನಿಸುತ್ತದೆ. ಯಾವನಾದರೂ ದೊಡ್ಡ ಚಕ್ರವರ್ತಿ ನಿನಗೆ ಏನು ಆಜ್ಞೆ ಮಾಡಿದ್ದಾನೋ? ಕಾರ್ಯಸಾಧನೆಯಾದ ಮೇಲೆ ಅವನಿಂದ ನೀನು ಎಂತಹ ಪ್ರತಿಫಲ ಪಡೆಯುವೆಯೋ, ನಿನ್ನ ಶಕ್ತಿ ಸಾಮರ್ಥ್ಯಗಳನ್ನು ಅವರು ಯಾವ ರೀತಿಯಲ್ಲಿ ಲೆಕ್ಕಹಾಕುವರೋ ಹೇಳುವುದು ಕಷ್ಟ. ಇಂತಹ ವಿಷಯಗಳಲ್ಲಿ ನೀನು ಮೊದಲೇ ತಕ್ಕ ಜಾಗರೂಕತೆಯಲ್ಲಿರಬೇಕೆಂದು' ಎಚ್ಚರಿಸುವಂತೆ ನಿನಗೆ ವೀರಕೇತು

ಬೇತಾಳಕಥೆಗಳು?...

ಮತ್ತು ಅಮರಸೇನರೆಂಬ ಕ್ಷತ್ರಿಯ ಯುವಕರ ಕಥೆಯೊಂದು ಹೇಳುತ್ತೇನೆ. ನಡೆಯುವ ಶ್ರಮವಾದರೂ ತಿಳಿಯದಂತೆ ಕೇಳುತ್ತಾ ಹೋಗು" ಎಂದು ಹೀಗೆ ಕಥೆಯನ್ನು ಹೇಳತೊಡಗಿತು:

ಒಂದು ಕಾಲದಲ್ಲಿ ಪುಷ್ಪಕವೆಂಬ ದೇಶವನ್ನು ಗರುಡವರ್ಧನನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನ ತಂದೆಯ ಕಾಲದಿಂದಲೇ ಸೈನಿಕಶಾಖೆಗೂ, ಗೂಢಚಾರೀ ಶಾಖೆಗೂ ಅಧಿಪತಿಗಳಾಗಿದ್ದ ಪ್ರಚಂಡಸೇನ ಮತ್ತು ಬಲವಂತವರ್ಮ ಎಂಬವರು ವೃದ್ಧರಾಗಿ ಹೋದುದರಿಂದ, ರಾಜನು ಬೇರೆ ಸಮರ್ಥರನ್ನು ಆರಿಸಿಕೊಂಡು ಆ ಪದವಿಗೆ ನಿಯಮಿಸಬೇಕಾದ ಪರಿಸ್ಥಿತಿ ಬಂದಿತು.

ಈ ವಿಷಯವನ್ನು ಚೆನ್ನಾಗಿ ವಿಚಾರಿಸಿದ ಮೇಲೆ ಆಸ್ಥಾನದಲ್ಲಿರುವ ವೀರಕೇತು ಮತ್ತು ಅಮರಸೇನ ಎಂಬ ಯುವಕರಿಬ್ಬರು ಒಳ್ಳೆಯ ಶಕ್ತಿ ಸಾಮರ್ಥ್ಯಗಳಿರುವವರೆಂದೂ, ವಿಶ್ವಾಸಕ್ಕೆ ಪಾತ್ರರಾದವರೆಂದೂ ಗೊತ್ತಾಯಿತು. ಅವರಲ್ಲಿ ಯಾವ ಪದವಿಗೆ ಯಾರನ್ನು ನಿಯಮಿಸುವುದೆಂದು ಗರುಡವರ್ಧನ ರಾಜನಿಂದ ನಿರ್ಣಯಿಸಲಾಗಲಿಲ್ಲ. ಅಂತಲೇ ರಹಸ್ಯ ಮಂದಿರದಲ್ಲಿ ಮಂತ್ರಿ ಮುಕುಂದವರ್ಮನೊಂದಿಗೆ ಅವರ ಹೆಚ್ಚು ಕಡಿಮೆಗಳನ್ನು ಕುರಿತು ಚರ್ಚೆಗೆ ತೊಡಗಿದನು.

ಆಗ ಮುಕುಂದವರ್ಮನು "ಮಹಾರಾಜಾ, ವೀರಕೇತುವನ್ನೂ, ಅಮರಸೇನನನ್ನೂ ಆರು ತಿಂಗಳವರೆಗೆ ಆ ಎರಡು ಪದವಿಗಳಲ್ಲಿಯೂ ನಿಯಮಿಸಿ ನೋಡೋಣ, ವೀರಕೇತು ಸೇನಾಧಿಪತಿಯಾಗಿದ್ದ ಕಾಲದಲ್ಲಿ ಅಮರಸೇನನು ಗೂಢಚಾರಶಾಖೆಯ ಅಧಿಕಾರಿಯಾಗಿರುತ್ತಾನೆ. ಆರು ತಿಂಗಳು ಕಳೆದ ಮೇಲೆ ಅಮರಸೇನನನ್ನು ಸೇನಾಧಿಪತಿಯಾಗಿಯೂ, ವೀರಕೇತುವನ್ನು ಗೂಢಶಾಖಾಧಿಕಾರಿಯಾಗಿಯೂ ಬದಲಾಯಿಸೋಣ. ತಮ್ಮ ಪದವಿಯ ಕಾಲದಲ್ಲಿ ಅವರು ತೋರಿಸುವ ಸಾಮರ್ಥ್ಯವನ್ನು ಹಿಡಿದು ಆಮೇಲೆ ಅವರನ್ನು ಆಯಾ ಪದವಿಗಳಲ್ಲಿ ಸ್ಥಿರಪಡಿಸಿ ಬಿಡೋಣ" ಎಂದನು.



ಈ ಆಲೋಚನೆ ಗರುಡವರ್ಧನ ರಾಜನಿಗೆ ಹಿಡಿಸಿತು. ಅವನು ವೀರಕೇತುವನ್ನು ಕರೆಯಿಸಿ, ಆರು ತಿಂಗಳ ವರೆಗೆ ಸೇನಾಧಿಪತಿ ಪದವಿಯನ್ನು ನಿರ್ವಹಿಸಬೇಕೆಂದು ಆಜ್ಞೆ ಮಾಡಿದನು. ಹಾಗೆಯೇ ಅಮರಸೇನನನ್ನು ಆರು ತಿಂಗಳವರೆಗೆ ಗೂಢಚಾರೀ ಶಾಖೆಯನ್ನು ನಿರ್ವಹಿಸಲು ಅಣತಿಕೊಟ್ಟನು. ಅವರಿಬ್ಬರೂ ಉತ್ಸಾಹದಿಂದ ತಮ್ಮ ತಮ್ಮ ಪದವಿಗಳನ್ನು ನಿರ್ವಹಿಸುವುದರಲ್ಲಿ ಉತ್ಸಾಹದಿಂದ ಚುರುಕಾಗಿ ಕೆಲಸಮಾಡಿದರು.

ಹೊಸ ಸೇನಾಧಿಪತಿ ವೀರಕೇತು ಅಶ್ವಿಕದಳವನ್ನೂ, ಗಜಬಲವನ್ನೂ ಕಾಲ್ಬಲವನ್ನೂ ಗಣಿಸಿ. ಅಶ್ವಿಕದಳವನ್ನು ದ್ವಿಗುಣಗೊಳಿಸಿದನು. ಗಜಬಲವನ್ನೂ ಕಾಲಂಶದಷ್ಟು ಏರಿಸಿದನು. ಅಷ್ಟು ಮಾತ್ರವಲ್ಲದೆ ಯುದ್ಧ ಸಮಯದಲ್ಲಿ ಸೈನಿಕರು ಅವಲಂಬಿಸಬೇಕಾದ ಕೆಲವು ಹಳೆಯ ವ್ಯೂಹಗಳನ್ನೂ, ಹಳೆಯ ತಂತ್ರಗಳನ್ನೂ ದೂರಸರಿಸಿ, ಹೊಸ ತಂತ್ರಗಳನ್ನೂ ಹೊಸ ವ್ಯೂಹೋಪಾಯಗಳನ್ನೂ ಪ್ರವೇಶಗೊಳಿಸಿದನು. ಅದೇ ಸಮಯದಲ್ಲಿ ಗಾಂಧಾರ ಮತ್ತು ಕಾಮರೂಪ ದೇಶಗಳಿಂದ ಮೇಲು ಜಾತಿಯ ಕುದುರೆಗಳನ್ನೂ, ಆನೆಗಳನ್ನೂ ತರಿಸಿದನು. ಕೆಲವು ಹೊಸ ಬಗೆಯ ಆಯುಧಗಳನ್ನು ಕೂಡಾ ವಿದೇಶಗಳಿಂದ ವರ್ತಕರ ಮೂಲಕ ಬರಮಾಡಿಸಿಕೊಂಡನು.

ಆರು ತಿಂಗಳಾದ ಕೂಡಲೇ ಸೇನಾಧಿಪತಿಯಾದ ವೀರಕೇತುವಿನ ಪದವಿಯ ಕಾಲ ಮುಗಿಯಿತು. ಗರುಡವರ್ಧನ ರಾಜನು ಅವನನ್ನು ಗೂಢಶಾಖಾಧಿಕಾರೀ ಪದವಿಗೆ ಕಳುಹಿಸಿ, ಆ ಪದವಿಯನ್ನು ನಿರ್ವಹಿಸಿಕೊಂಡಿದ್ದ ಅಮರಸೇನನನ್ನು ಸೇನಾಧಿಪತಿಯ ಪದವಿಗೆ ಬದಲಾಯಿಸಿದನು.

ಅಮರಸೇನನು ಸೇನಾಧಿಪತಿಯಾದ ಕೂಡಲೇ, ಬೇರೆ ದೇಶಗಳಿಂದ ಮೇಲು ಜಾತಿಯ ಆನೆಗಳನ್ನೂ ಕುದುರೆಗಳನ್ನೂ ತರಿಸುವುದನ್ನು ನಿಲ್ಲಿಸಿದನು. ಆಯುಧಗಳ ವಿಷಯದಲ್ಲಿ ಮಾತ್ರವಲ್ಲದೆ, ಸೈನಿಕ ಶಿಕ್ಷಣ ಮೊದಲಾದುವುಗಳಲ್ಲಿ ಕೂಡಾ ತಿರುಗಿ ಹಳೆಯ ಪದ್ಧತಿಗಳನ್ನೇ ಪ್ರವೇಶಗೊಳಿಸಿದನು. ಯಾವ ವಿಷಯ





ದಲ್ಲಾದರೂ, ತಮ್ಮದನ್ನೇ ತಾವು ಅನುಸರಿಸಬೇಕಲ್ಲದೆ ಪರಕೀಯರನ್ನು ಅನುಸರಿಸುವುದರಿಂದ, ಸ್ವದೇಶಕ್ಕೆ ಅವಮಾನ ಮಾಡಿದಂತೆ ಎಂಬುದು ಅವನ ನಂಬುಗೆ. ಅದು ದೇಶಭಕ್ತರು ಮಾಡುವ ಕೆಲಸವಲ್ಲವೆಂಬುದು ಅವನ ಮತ.

ಅವನು ಸೇನಾಧಿಪತಿಯಾಗಿ ಮೂರು ತಿಂಗಳು ಕಳೆಯುವಷ್ಟರಲ್ಲಿ ಪಕ್ಕದಲ್ಲಿದ್ದ ಜಯಪುರದ ರಾಜನು ಪುಷ್ಪಕದೇಶದ ಮೇಲೆ ದಂಡೆತ್ತಿ ಬಂದನು. ಅಮರ ಸೇನನು ಅತ್ಯಂತ ಜಾಣತನದಿಂದ ಸೈನ್ಯವನ್ನು ಸಾಗಿಸಿ ವಿರೋಚಿತವಾಗಿ ಹೋರಾಡಿ ಜಯಪುರ ರಾಜ್ಯದ ಸೈನಿಕರನ್ನು ಓಡಿಸಿಬಿಟ್ಟನು. ಈ ಪೆಟ್ಟಿನಿಂದ ಜಯ ಪುರದ ರಾಜನು ಮತ್ತೆಂದೂ ಹಿಂದಿರುಗಿ ನೋಡಲಿಲ್ಲ.

ಅವನ ಸೇನಾಧಿಪತಿಯ ಕಾಲ ಇನ್ನೊಂದು ತಿಂಗಳು ಮಾತ್ರವೇ ಉಳಿದಿರುವಾಗ, ಪುಷ್ಪಕದೇಶದ ದಕ್ಷಿಣ ದಿಕ್ಕಿನಲ್ಲಿರುವ ವಿದರ್ಭದ ರಾಜನು ದೊಡ್ಡ ಸೈನ್ಯದೊಂದಿಗೆ ದಾಳಿ ಬಂದನು. ಯುದ್ಧವು ಘನ ಘೋರವಾಗಿ ನಡೆಯಿತು. ಸೈನ್ಯ ನಷ್ಟವು ದೊಡ್ಡ ದಾದರೂ ಅಮರಸೇನನ ಪರಾಕ್ರಮವು ಚೆನ್ನಾಗಿ ಬಯಲಾಯಿತು. ಅವನ ಯುದ್ಧ ನೈಪುಣ್ಯತೆಯಿಂದ ಮತ್ತೆ ಪುಷ್ಪಕದೇಶಕ್ಕೇ ವಿಜಯವಾಯಿತು.

ಇದೆಲ್ಲಾ ಮುಗಿದ ಮೇಲೆ ಅಮರಸೇನನ ಅಧಿಕಾರಾವಧಿಯೂ ಮುಗಿಯಿತು. ಮಂತ್ರಿ ಮುಕುಂದವರ್ಮನು ಗರುಡವರ್ಧನ ರಾಜನನ್ನು ದರ್ಶನಮಾಡಿ, "ಮಹಾರಾಜಾ, ವೀರಕೇತು ಮತ್ತು ಅಮರಸೇನರಿಗೆ ನಾವಿಟ್ಟ ಆರು ತಿಂಗಳ ಗಡು ಮುಗಿಯಿತು. ಈ ಪರೀಕ್ಷೆಯಂತೆ ನನಗೆ ತೋರುವು ದನ್ನು ಹೇಳುತ್ತೇನೆ. ಸೇನಾಧಿಪತಿ ಪದವಿಗೆ ವೀರ ಕೇತುವೇ ಅರ್ಹನು. ಅವನಿಗೆ ಆ ಪದವಿಯನ್ನು ಕೊಡುವುದು ಒಳ್ಳೆಯದು. ಅಮರಸೇನನು ಗೂಢಚಾರೀ ಶಾಖಾಧಿಕಾರಕ್ಕೇ ಸರಿ. ಹೀಗೆ ಪದವಿ ಸ್ಥಿರಪಡಿಸಿಬಿಡಿರಿ." ಎಂದನು.

"ಹೌದು. ನಾನು ಕೂಡಾ ಇದೇ ಆಲೋಚನೆಗೆ ಬಂದಿದ್ದೇನೆ. ಈಗಾಗಲೇ ನಮ್ಮ ಮೇಲೆ ಎರಡು ದೇಶಗಳು ದಾಳಿಮಾಡಿ ಮುಗಿಸಿವೆ. ಮುಂದೆ ಬೇಗದಲ್ಲಿ ಗೌಡ ದೇಶದ ರಾಜನು ನಮ್ಮ ಮೇಲೆ ಯುದ್ಧಕ್ಕೆ ಬಂದು ಅಮರಸೇನನ ಕೈಯಲ್ಲಿ ಪ್ರಾಣ ಕಳಕೊಳ್ಳಲೂ ಬಹುದು. ಹಾಗಾಗುವುದು ನಮಗೆ ಕ್ಷೇಮವಲ್ಲ." ಎಂದು ಹೇಳಿ ಮುಗುಳು ನಗು ಸೂಸಿದನು ರಾಜ.

ಮತ್ತೊಂದು ವಾರದೊಳಗೆ ಒಂದು ಒಳ್ಳೆಯ ಮುಹೂರ್ತದಲ್ಲಿ ರಾಜನು ವೀರಕೇತುವನ್ನು ಸೇನಾಧಿಪತಿಯಾಗಿಯೂ, ಅಮರಸೇನನನ್ನು ಗೂಢ ಶಾಖಾಧಿಕಾರಿಯಾಗಿಯೂ ನಿಯಮಿಸಿ, ಇಬ್ಬರಿಗೂ ಬೆಲೆಬಾಳುವ ಬಹುಮಾನಗಳನ್ನು ಕೊಟ್ಟು ಗೌರವಿಸಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಅಮರಸೇನನು ತನ್ನ ದೇಶದ ಮೇಲೆ ದಾಳಿಗೆ ಬಂದ

ಎರಡು ದೇಶದ ಸೈನ್ಯಗಳನ್ನೂ ಸ್ಥೋಲಿಸಿ ಓಡಿಸಿದ್ದಾನೆ. ಸೇನಾಧಿಪತಿಯಾದವನು ತನ್ನ ಯುದ್ಧ ನೈಪುಣ್ಯತೆಯನ್ನು ಇದಕ್ಕಿಂತ ಹೆಚ್ಚಾಗಿ ರುಜುಪಡಿಸಲು ಸಾಧ್ಯವಿಲ್ಲವಷ್ಟೆ ? ಹಾಗಿರುವಾಗ ಗರುಡವರ್ಧನ ರಾಜನು ಅವನನ್ನು ಆ ಪದವಿಯಿಂದ ಬೇರ್ಪಡಿಸಿ, ವೀರಕೇತುವಿಗೆ ಆ ಪದವಿಯನ್ನು ಕೊಟ್ಟುದು ಅವಿವೇಕದಿಂದಲೋ, ಅಸೂಯೆಯಿಂದಲೋ ? ಈ ಸಂದೇಹಕ್ಕೆ ಸಮಾಧಾನ ತಿಳಿದಿದ್ದೂ ಹೇಳದೆ ಹೋದೆಯಾದರೆ ನಿನ್ನ ತಲೆ ಒಡೆದು ಪುಡಿಪುಡಿಯಾಗಿ ಹೋಗುತ್ತದೆಂಬುದನ್ನು ಮರೆಯಬೇಡ." ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ಗರುಡ ವರ್ಧನ ರಾಜನಲ್ಲಿ ನೀನು ಹೇಳುವ ಅವಲಕ್ಷಣಗಳೊಂದೂ ಇಲ್ಲ. ಅವನು ವಿವೇಕವನ್ನೂ, ರಾಜನೀತಿಯನ್ನೂ ವ್ಯಕ್ತಪಡಿಸಿದ್ದಾನೆ. ಸೇನಾಧಿಪತಿ ಆದವನಿಗೆ ದೇಶಭಕ್ತಿಯೂ, ಮಾತೃದೇಶದ ಮೇಲೆ ಅತ್ಯಂತ ಗೌರವವೂ ಹುದುಗಿಕೊಂಡಿದ್ದ ಮಾತ್ರಕ್ಕೆ ಸಾಲದು. ಅವನು ಆಯಾ ಕಾಲಗತಿಗೆ ಸರಿಯಾಗಿ ನೆರೆದೇಶಗಳಲ್ಲಿರುವ ಸೈನಿಕರ, ಆಯುಧಗಳ ಸಂಪತ್ತಿನ ಮೇಲೆ ಕೂಡಾ ಒಂದು ಕಣ್ಣಿಟ್ಟಿರಬೇಕು. ಅವರಿಗಿಂತ ತನ್ನ ಸೈನಿಕರನ್ನು ಇನ್ನಿಷ್ಟು ಸುಶಿಕ್ಷಿತರಾಗುವಂತೆ ಮಾಡಬೇಕು. ಆಯುಧಗಳ ವಿಷಯದಲ್ಲಿ ಕೂಡಾ ಉಳಿದವರಿಗಿಂತ ಮೇಲುಗೈಯಾಗಿ ಇಟ್ಟಿರಬೇಕು. ವೀರಕೇತು ಈ ಬಗೆಯ ಜಾಗರೂಕತೆಯುಳ್ಳಿದ್ದುದರಿಂದಲೇ, ಅವನು ಸೇನಾಧಿಪತಿಯಾಗಿದ್ದ ಕಾಲದಲ್ಲಿ ನೆರೆದೇಶಗಳವರು ದಾಳಿ ಮಾಡಲು ಹೆದರಿ ಸುಮ್ಮನಿದ್ದರು. ಆದರೆ ಅಮರಸೇನನ ಸೇನಾಧಿಪತ್ಯದಲ್ಲಿ ಅದಕ್ಕೆ ಭಿನ್ನವಾಗಿಯೇ ನಡೆಯಿತು. ಆದುದರಿಂದಲೇ ಪುಷ್ಪಕ ದೇಶದ ಬಲವನ್ನು ಅಲ್ಪವೆಂದೆಣಿಸಿ ಶತ್ರುಗಳು ದಂಡೆತ್ತಿ ಬಂದರು. ಯುದ್ಧದಲ್ಲಿ ದೊಡ್ಡ ನಷ್ಟಗಳಿಂದ, ಹಾಗೂ ಹೀಗೂ ವಿಜಯ ಸಾಧಿಸಿಕೊಳ್ಳುವುದಕ್ಕಿಂತ, ಶತ್ರುಗಳು ದಂಡೆತ್ತಿ ಬರಲು ಹೆದರುವಂತೆ ಮಾಡುವವನೇ ನಿಜವಾದ ಸೇನಾಧಿಪತಿ. ವೀರಕೇತು ಅಂತಹ ಸಮರ್ಥನು. ಈ ವಿಷಯದಲ್ಲಿ ಅಮರಸೇನನು ವಿಫಲನಾಗಿದ್ದಾನೆ. ಆದರೆ ಅಮರಸೇನನಲ್ಲಿರುವ ದೇಶಭಕ್ತಿಯನ್ನೂ ಸ್ವದೇಶಾಭಿಮಾನವನ್ನೂ ಗುರುತಿಸಿದ ರಾಜನು ಅವನಿಗೆ ಗೂಢಚಾರೀ ಅಧಿಕಾರವನ್ನು ಒಪ್ಪಿಸಿದುದು ನ್ಯಾಯವೇ. ಆ ಪದವಿಗೆ ಅದಕ್ಕಿಂತ ಹೆಚ್ಚಿನ ಅರ್ಹತೆ ಬೇರೊಂದಿಲ್ಲ. ಆದುದರಿಂದ ಗರುಡವರ್ಧನ ರಾಜನ ನಿರ್ಣಯವು ಸರಿಯಾದುದೇ !"

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವ ಸಮೇತ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.






# ವಿದೂಷಕನ ಪ್ರಶ್ನೆ

ಒಂದು ಕಾಲದಲ್ಲಿ ಉಜ್ಜಯಿನೀ ನಗರದ ರಾಜನಾಗಿದ್ದ ಮಾಧವವರ್ಮನ ಆಸ್ಥಾನದಲ್ಲಿ ಅನೇಕ ಮಂದಿ ವಿದ್ವಾಂಸರಾದ ಪಂಡಿತರಿದ್ದರು. ಒಂದು ದಿನ ರಾಜನು ಒಡ್ಡೋಲಗ ನಡೆಸಿಕೊಂಡಿದ್ದಾಗ, ಖಣಖಣನೆ ಕಂಚಿನ ಢಕ್ಕೆಯನ್ನು ಮೊಳಗಿಸುತ್ತ, ಮಧ್ಯಮ ವಯಸ್ಸಿನ ಪಂಡಿತನಂತೆ ಕಾಣುವ ಹೊಸಬನೊಬ್ಬನು ಸಭೆಯೊಳಗೆ ಪ್ರವೇಶಮಾಡಿದನು. ಈ ಬಗೆಯ ಅವನ ರೀತಿ ಎಲ್ಲರನ್ನೂ ಬೆರಗುಗೊಳಿಸಿತು.

ಮುಂದಾಗಿ ತಿಳಿಸಿ ಅನುಜ್ಞೆ ಕೇಳದೆ ಹಾಗೆ ರಾಜಸಭೆಯೊಳಗೆ ಪ್ರವೇಶಿಸಿದವನನ್ನು ರಾಜನು ಆಶ್ಚರ್ಯದಿಂದ ನೋಡಿದನು. "ಮಹಾರಾಜರೇ, ನಿಮ್ಮ ಅಭಿಪ್ರಾಯ ಗೊತ್ತಾಯಿತು. ಪಂಡಿತ ಪೋಷಕರಾದ ನಿಮಗೆ ಪಂಡಿತರ ಮಹತ್ವ ತಿಳಿಯದ್ದಲ್ಲ. ನನ್ನದು ಕಳಿಂಗ ದೇಶ. ಹತ್ತು ವರ್ಷಗಳಿಂದ ನಾನು ದೇಶ ಸಂಚಾರ ಮಾಡುತ್ತ, ಅನೇಕ ರಾಜಾಸ್ಥಾನಗಳಲ್ಲಿದ್ದ ಪಂಡಿತರನ್ನು ಸೋಲಿಸಿದ್ದೇನೆ. ನಿಮ್ಮ ಆಸ್ಥಾನದಲ್ಲಿ ದೊಡ್ಡ ಪಂಡಿತರಿರುವುದನ್ನು ತಿಳಿದು ಇಲ್ಲಿಗೆ ಬಂದಿರುವೆನು. ನನ್ನಂಥ ಧೈರ್ಯಶಾಲೀ ಪಂಡಿತನನ್ನು ಈವರೆಗೂ ನೀವು ನೋಡಿರಲಿಲ್ಲವೆಂಬುದು ನಿಮ್ಮ ಆಶ್ಚರ್ಯವು ಸೂಚಿಸುತ್ತದೆ." ಎಂದನು.

ರಾಜಾ ಮಾಧವವರ್ಮನು ಸಭೆಯಲ್ಲಿರುವ ಪಂಡಿತರ ಕಡೆಗೆ ಒಂದು ಸಾರಿ ನೋಡಿ, "ಸೋಮಶೇಖರರೇ, ನೀವು ಹೇಳುವ ವಾದ ಪ್ರತಿವಾದಗಳಿಗೆ ನೀವು ಇಟ್ಟುಕೊಂಡಿರುವ ನಿಯಮವೇನಾದರೂ ಇದ್ದರೆ ಹೇಳಿರಿ." ಎಂದನು.

"ನಿಯಮ ನಿಬಂಧನೆಗಳಿಲ್ಲ. ವಾದ ಪ್ರತಿವಾದಗಳಿಂದ ಪ್ರಯೋಜನವೇನಿದೆ? ಯಾರೇ ಆಗಲಿ, ಪಂಡಿತ ಪಾಮರ ಭೇದವೇನಿಲ್ಲದೆ ಎಂತಹ ಪ್ರಶ್ನೆಯನ್ನಾದರೂ ಕೇಳಬಹುದು. ಒಂದು ವೇಳೆ ಅವುಗಳಿಗೆ ಸರಿಯಾದ ಉತ್ತರ ನನ್ನಿಂದ ಕೊಡಲಾರದೆ ಹೋದರೆ ನನ್ನ ಕಂಚಿನ ಢಕ್ಕೆಯನ್ನು ಒಡೆದುಹಾಕಿ ಸಾಯುವವರೆಗೂ ಅವರ ಸೇವಕನಾಗಿರುತ್ತೇನೆ. ಹಾಗಿಲ್ಲದೆ ಪ್ರಶ್ನೆ ಕೇಳಿದವರು ಸೋತುಹೋದರೆ, ಅವರು ನನ್ನ ಪಾದಗಳಿಗೆ ನಮಸ್ಕಾರ ಮಾಡಿ, ನನ್ನನ್ನು ಮಹಾಪಂಡಿತನೆಂದು ಅಂಗೀಕರಿಸಿದರೆ ಸಾಕು. ಹೆಚ್ಚಿನ ಬಹುಮಾನಗಳೇನೂ ನನಗೆ ಬೇಕಾಗಿಲ್ಲ." ಎಂದನು ಪಂಡಿತ ಸೋಮಶೇಖರ.

ಬಿ. ಪ್ರಸಾದರಾವು



ಸಭೆಯಲ್ಲಿದ್ದ ಪಂಡಿತರೆಲ್ಲಾ ಇದಕ್ಕೆ ಒಪ್ಪಿಕೊಂಡರು. ಆಮೇಲೆ ಪ್ರಶ್ನೋತ್ತರಗಳು ಪ್ರಾರಂಭವಾದುವು. ಪಂಡಿತರು ಅನೇಕ ಶಾಸ್ತ್ರ ವಿಷಯಗಳನ್ನು ಕುರಿತು ಒಬ್ಬೊಬ್ಬರೇ ಪ್ರಶ್ನೆಗಳನ್ನು ಕೇಳಿದರು. ಎಲ್ಲದಕ್ಕೂ ಸೋಮಶೇಖರನು ಸರಿಯಾದ ಉತ್ತರವನ್ನು ಕೊಟ್ಟು ಅವರನ್ನು ಸೋಲಿಸಿಬಿಟ್ಟನು.

ತನ್ನ ಸಭೆಯಲ್ಲಿದ್ದ ಎಲ್ಲ ಪಂಡಿತರೂ ಸೋತು ಹೋದುದನ್ನು ನೋಡಿ ರಾಜನಿಗೆ ಬಹಳ ಕಳವಳ ವಾಯಿತು. ತನ್ನ ಆಸ್ಥಾನದ ಪಂಡಿತ ವೃಂದದ ಮೇಲೆ ರಾಜನಿಗೆ ತುಂಬಾ ಅಭಿಮಾನವಿದ್ದಿತು. ದೊಡ್ಡ ಅಭಿಪ್ರಾಯವಿದ್ದಿತು. ಅದಕ್ಕೆ ಭಂಗ ಬರುವ ಪ್ರಸಂಗ ಬಂದುದನ್ನು ನೋಡಿ ರಾಜನು ಬಹಳ ನೊಂದನು. ಈ ಅವಮಾನವನ್ನು ಹೇಗೆ ಕಳೆದು ಕೊಳ್ಳುವುದೆಂದು ಗೊತ್ತಾಗದೆ ವಿಚಾರಕ್ಕೆ ಬಿದ್ದನು.

ಸೋಮಶೇಖರನು ವಿಜಯವನ್ನು ಸೂಚಿಸುವಂತೆ ಕಂಚಿನ ಢಕ್ಕೆಯನ್ನು ಮೊಳಗಿಸಿ, "ಮಹಾರಾಜಾ, ನನ್ನ ನಿಯಮಗಳನ್ನು ಮೊದಲೇ ಹೇಳಿದ್ದೇನೆ. ನಿಮ್ಮ ಪಂಡಿತರೆಲ್ಲಾ ನನ್ನ ಮುಂದೆ ಪೂರ್ತಿ ಸೋತಿದ್ದಾರೆ. ನಾನು ಇನ್ನೊಂದು ರಾಜಾಸ್ಥಾನಕ್ಕೆ ಹೋಗಿ ಅಲ್ಲಿಯ ಪಂಡಿತರನ್ನು ಸೋಲಿಸಲು ಆತುರಪಡುತ್ತಿದ್ದೇನೆ." ಎಂದನು ಗರ್ವದಿಂದ.

ಸಭೆಯಲ್ಲಿದ್ದ ಪಂಡಿತರು ಅವಮಾನದಿಂದ ತಲೆ ತಗ್ಗಿಸಿಕೊಂಡು, ಸೋಮಶೇಖರನ ಪಾದಗಳಿಗೆ ನಮಸ್ಕರಿಸಲು ಏಳಲು ನೋಡುವಾಗ, ಆಸ್ಥಾನದ ವಿದೂಷಕನು ತಟ್ಟನೆದ್ದು, "ಇಷ್ಟರವರೆಗೆ ಪಂಡಿತರದು ಮಾತ್ರವೇ ಆಯಿತು. ನಾನೊಬ್ಬ ಸಾಧಾರಣದ ಪಾಮರ. ನಾನೂ ಸಹ ಪ್ರಶ್ನೆ ಕೇಳಬಹುದಷ್ಟೇ ?" ಎಂದು ಕೇಳಿದನು.

ಅವನ ಪ್ರಶ್ನೆಗೆ ಸೋಮಶೇಖರನು ನಕ್ಕು, "ನೀನು ಪಂಡಿತನಲ್ಲವೆಂದು ನಿನ್ನ ವೇಷವೇ ಹೇಳುತ್ತದೆ. ನಾನು ಮೊದಲೇ ಮಹಾರಾಜರೊಂದಿಗೆ ಸೂಚಿಸಿದ್ದೇನೆ. ಎಂಥವರು ಕೇಳುವ ಪ್ರಶ್ನೆಗಳಿಗೂ ಸರಿಯಾದ ಉತ್ತರ ಕೊಡುತ್ತೇನೆಂದು. ಅದಾಗದಿದ್ದರೆ ಬದುಕಿರುವಷ್ಟು ಕಾಲ ಅವರ ಸೇವಕನಾಗಿರುತ್ತೇನೆ" ಎಂದನು.

"ಹಾಗಾದರೆ ನನ್ನ ಪ್ರಶ್ನೆ ಕೇಳಿರಿ. ಇಬ್ಬರು ಮೂರ್ಖರು ದಾರಿಯಲ್ಲಿ ಹೋಗುತ್ತ ಕಾಲು ಜಾರಿ ಕೊಳೆಯ ಕಾಲುವೆಗೆ ಬಿದ್ದರು. ಒಬ್ಬನ ದೇಹವೆಲ್ಲಾ ಕೊಳಕಾಯಿತು. ಮತ್ತೊಬ್ಬನದು ಆಗಲಿಲ್ಲ. ಅವರಿಬ್ಬರಲ್ಲಿ ಯಾರು ಸ್ನಾನಮಾಡುತ್ತಾರೆ ?" ಎಂದು ವಿದೂಷಕನು ಪ್ರಶ್ನಿಸಿದನು.

"ಮೈಗೆಲ್ಲಾ ಕೊಳೆ ಅಂಟಿಕೊಂಡವನೇ ಸ್ನಾನ ಮಾಡುತ್ತಾನೆ." ಎಂದನು ಸೋಮಶೇಖರ.

"ಅಲ್ಲ. ಮೊದಲೇ ಅವರು ಮೂರ್ಖರೆಂದು ಹೇಳಿದ್ದೇನೆ. ಮೈಗೆ ಕೊಳೆ ಅಂಟಿದವನು ತನ್ನ ಜತೆಗಾರನನ್ನು ನೋಡಿ ತನಗೇನೂ ಕೊಳೆ ಅಂಟಲಿಲ್ಲವೆಂದು ತಿಳಿಯುತ್ತಾನೆ. ಕೊಳೆಯಾಗದವನು ಜತೆಗಾರನನ್ನು ನೋಡಿ, ತನ್ನ ಶರೀರಕ್ಕೂ ಕೊಳೆಯಾಗಿದೆ

ಎಂದು ತಿಳಿದುಕೊಂಡು, ಕೆರೆಗೆ ಹೋಗಿ ಸ್ನಾನ ಮಾಡುತ್ತಾನೆ" ಎಂದನು ವಿದೂಷಕ.

ಯುಕ್ತಿಯುಕ್ತವಾದ ವಿದೂಷಕನ ಮಾತನ್ನು ಅಲ್ಲಗಳೆಯಲಾಗದೆ ಸೋಮಶೇಖರನು ಮೇಲೆ ನೋಡಿ ತಟಪಟಾಯಿಸಿದನು.

ವಿದೂಷಕನು ಉತ್ಸಾಹದಿಂದ, "ಇನ್ನೊಂದು ಪ್ರಶ್ನೆಯನ್ನು ಕೇಳಿರಿ. ಇಬ್ಬರು ಒಳ್ಳೆಯ ಬುದ್ಧಿವಂತರು ದಾರಿಯಲ್ಲಿ ನಡೆಯುತ್ತ ಹೇಗೋ ಕಾಲು ಜಾರಿ ಪಕ್ಕದಲ್ಲಿದ್ದ ಗಂಜಳದ ಕಾಲುವೆಗೆ ಬಿದ್ದರು. ಒಬ್ಬನಿಗೆ ಮಾತ್ರ ಕೊಳೆ ಅಂಟಿತು. ಇನ್ನೊಬ್ಬನಿಗೆ ವಿನೂ ಆಗಲಿಲ್ಲ. ಅವರಲ್ಲಿ ಕೊಳೆಯನ್ನು ತೊಳೆದುಕೊಳ್ಳಲು ಯಾರು ಸ್ನಾನಮಾಡುತ್ತಾರೆ?" ಎಂದು ಕೇಳಿದನು.

ಸೋಮಶೇಖರನು ವಿದೂಷಕನ ಮೊದಲನೇ ಪ್ರಶ್ನೆಯನ್ನು ನೆನೆದುಕೊಂಡು, "ಕೊಳೆಯೇನೂ ಅಂಟದಿರುವವನೇ ಸ್ನಾನಮಾಡುತ್ತಾನೆ" ಎಂದು ಉತ್ತರಕೊಟ್ಟನು.

ವಿದೂಷಕನು ಗಟ್ಟಿಯಾಗಿ ನಗುತ್ತ "ನಾನು ಮೊದಲೇ ಹೇಳಿದ್ದೇನೆ. ಅವರಿಬ್ಬರೂ ಬುದ್ಧಿವಂತರೆಂದು. ಆ ಕಾರಣದಿಂದ ಕೊಳಕು ಅಂಟಿಕೊಂಡವನೇ ಅದನ್ನು ಕಳೆದುಕೊಳ್ಳಲು ಸ್ನಾನ ಮಾಡುತ್ತಾನೆ" ಎಂದನು.

ಸಭೆಯಲ್ಲಿರುವವರೆಲ್ಲಾ ಸಂತೋಷದಿಂದ ಚಪ್ಪಾಳೆ ತಟ್ಟಿದರು. ತಾನು ಎರಡನೇಸಾರಿ ಕೂಡಾ ಸೋತುದನ್ನು ತಿಳಿದು ಸೋಮಶೇಖರನು ದಿಕ್ಕುದಿಕ್ಕು ನೋಡುತ್ತ ಮೋರೆ ಕಂದಿ ನಿಂತನು.

ವಿದೂಷಕನು ಅವನ ಬಳಿಗೆ ಬಂದು, "ಅಲ್ಲ ಸ್ವಾಮಿ, ದಾರಿಯಲ್ಲಿ ಹೋಗುವ ಇಬ್ಬರು ಕೊಳಕಿನೊಳಗೆ ಬಿದ್ದರೆ ಒಬ್ಬರಿಗೆ ಕೊಳಕು ಅಂಟುವುದೂ, ಇನ್ನೊಬ್ಬರಿಗೆ ಅಂಟದಿರುವುದೂ ಸಾಧ್ಯವೆ? ಮಹಾ ಪಂಡಿತರೆಂದು ಕಂಚಿನ ಢಕ್ಕೆ ಮೊಳಗಿಸಿಬಿಟ್ಟರಾಯಿತೆ? ಇಷ್ಟು ಸಣ್ಣ ವಿಷಯ ತಿಳಿದಿಲ್ಲವೆ?" ಎಂದನು.

ಸೋಮಶೇಖರನು ವಿನಯದಿಂದ ಬಾಗಿ ತನ್ನ ಕಂಚಿನ ಢಕ್ಕೆಯನ್ನು ವಿದೂಷಕನ ಪಾದಗಳ ಹತ್ತಿರ ಇಟ್ಟುಬಿಟ್ಟನು.

ರಾಜಾ ಮಾಧವವರ್ಮನು ಅವನನ್ನು ಇನ್ನಿಷ್ಟು ಅವಮಾನ ಪಡಿಸುವುದು ತರವಲ್ಲವೆಂದುಕೊಂಡು, "ಸೋಲು ಗೆಲುವು ಸಹಜವಾದರೂ, ಸೋತವರಿಂದ ಸೇವೆ ಮಾಡಿಸಿಕೊಳ್ಳುವವರು ನಾವಲ್ಲ" ಎಂದು ಹೇಳಿ, ಅವನು ಸಭೆಯಿಂದ ಹೊರಟು ಹೋಗಲಿಕ್ಕೆ ಅನುಜ್ಞೆ ಮಾಡಿದನು. ಆಮೇಲೆ ಆ ಕಂಚಿನ ಢಕ್ಕೆಯ ಪಂಡಿತನ ಸುದ್ದಿ ಏನಾಯಿತೆಂದು ಯಾರಿಗೂ ತಿಳಿಯಲಿಲ್ಲ.





# ಕುರುಡು ನ್ಯಾಯ

**ಹಿಂದೆ** ಒಂದು ಕಾಲದಲ್ಲಿ ಒಗ್ಗಟ್ಟಾಗಿರುವ ಮೂವರು ಕುರುಡರು ಬಾಗ್ದಾದು ನಗರದಲ್ಲಿದ್ದರು. ಭಿಕ್ಷುಕರಾದ ಅವರು ಮೂವರೂ ಸ್ನೇಹದಿಂದಲೇ ಊರು ತಿರುಗಿ ಭಿಕ್ಷೆ ಬೇಡುತ್ತಿದ್ದರು. ಭಿಕ್ಷೆ ಬೇಡಿ ಸಿಕ್ಕಿದುದರಲ್ಲಿ ತಮ್ಮ ತಿಂಡಿಯ ಖರ್ಚು ಹೋಗಲಾಗಿ ಉಳಿದ ಸಂಪಾದನೆಯನ್ನು ತಾವು ಉಳಿದುಕೊಂಡಿರುವ ಒಂದು ಮನೆಯೊಳಗೆ ಭದ್ರವಾಗಿ ಇರಿಸಿಕೊಳ್ಳುವರು. ಹೀಗೆ ಉಳಿಸಿದ ಹಣ ಈಗಾಗಲೇ ಹನ್ನೆರಡು ನೂರು ಬೆಳ್ಳಿ ನಾಣ್ಯಗಳಾಗಿದ್ದುವು.

ಒಂದು ದಿನ ಅವರಲ್ಲೊಬ್ಬ ಕುರುಡು ಭಿಕ್ಷುಕನು ಒಂದು ಬೀದಿಯಲ್ಲಿ ಪ್ರವೇಶಿಸಿ ಒಂದು ಮನೆಯ ತಲೆ ಬಾಗಿಲನ್ನು ಪಟಪಟನೆ ತಟ್ಟಿದನು.

ಒಳಗಿನಿಂದ ಮನೆಯ ಯಜಮಾನನು "ಯಾರವರು ?" ಎಂದು ಪ್ರಶ್ನೆ ಮಾಡಿದನು. ಆದರೆ ಕುರುಡ ಭಿಕ್ಷುಕ ಉತ್ತರವೇನೂ ಕೊಡದೆ ಮತ್ತೆ ಬಾಗಿಲು ತಟ್ಟಿದನು. ತಾನು ಭಿಕ್ಷುಕನೆಂದು ಹೇಳಿಬಿಟ್ಟರೆ ಮನೆಯವರು ಬಾಗಿಲು ತೆರೆಯದೆ ಭಿಕ್ಷೆ ಇಲ್ಲವೆಂದು ಹೇಳಿಬಿಡುತ್ತಾರೆ. ಈ ಸಂಗತಿ ಕುರುಡ ಭಿಕ್ಷುಕನಿಗೆ ಅನುಭವದಿಂದ ಗೊತ್ತಾಗಿತ್ತು.

ಮನೆಯ ಒಡೆಯನು "ಯಾರದೂ ?" ಎಂದು ಎರಡನೇ ಸಾರಿ ಕೂಗಿ ಕೇಳಿದನು. ಅದಕ್ಕೂ ಯಾವ ಉತ್ತರವೂ ಬಾರದಿರುವುದನ್ನು ನೋಡಿ, ಬಾಗಿಲು ತೆರೆದು ಕುರುಡನನ್ನು ನೋಡಿ ಬೆರಗಾಗಿ, "ಯಾರು ನೀನು ?" ಎಂದು ಕೇಳಿದನು.

"ಕುರುಡ, ದೊರೆಗಳೇ ! ದೊಡ್ಡವರು ದಯ ದೋರಬೇಕು" ಎಂದನು ದೈನ್ಯತೆಯಿಂದ.

ಕೂಡಲೇ ಮನೆಯ ಯಜಮಾನನು ಭಿಕ್ಷುಕನಿಗೆ ತನ್ನ ಕೈಯನ್ನು ಆಸರೆಗೊಟ್ಟು, "ನನ್ನ ಕೈ ಹಿಡಿದುಕೊಂಡು ಒಳಗೆ ಬಾ" ಎಂದನು.

ತನ್ನ ಬೇಳೆ ಬೇಯುತ್ತದೆಂದುಕೊಂಡು ಆ ಕುರುಡ ಭಿಕ್ಷುಕನು ಮನೆಯ ಯಜಮಾನನನ್ನು ಅನುಸರಿಸಿ ಮಾಳಿಗೆಯ ಮೆಟ್ಟಿಲಿನಲ್ಲಿ ಏರುತ್ತ ಮೂರನೇ ಅಂತಸ್ತಿನವರೆಗೂ ಹೋದನು.

"ಹುಂ, ಇಲ್ಲಿ ಕುಳಿತುಕೊಂಡು ನಿನಗೆ ಏನು ಬೇಕೆಂಬುದನ್ನು ಹೇಳು" ಎಂದನು ಯಜಮಾನ.

"ಹೊಟ್ಟೆಯಲ್ಲಿ ಹಸಿವೆಯ ಬೆಂಕಿ ಹೊತ್ತಿಕೊಂಡಿದೆ ದೊರೆಗಳೇ. ತಿಂಡಿಯೋ ಇಲ್ಲಾ ಹಣಕಾಸು ದಯ ಮಾಡಿದರೂ ಸರಿಯೇ" ಎಂದನು ಭಿಕ್ಷುಕ.

"ಹಾಗೇನು ನಿನ್ನ ಕತೆ! ಇಲ್ಲಿ ಅದಾವುದೂ ಇಲ್ಲ. ಇನ್ನೊಂದು ಮನೆಯನ್ನು ನೋಡಿಕೋ. ಹೋಗು" ಎಂದನು ಮನೆಯ ಯಜಮಾನ.

"ಈ ಮಾತು ಹೇಳಲು ಇಷ್ಟು ಮೆಟ್ಟಿಲು ಹತ್ತಿಸಿ ಕರಕೊಂಡು ಬರಬೇಕಿತ್ತೇ? ಕೆಳಗೇ ಹೇಳಿ ಬಿಡುತ್ತಿದ್ದರೆ ಹೋಗಿಬಿಡುತ್ತಿದ್ದೆನಲ್ಲಾ?" ಎಂದನು ಕುರುಡ ಭಿಕ್ಷುಕ.

"ಯಾರೆಂದು ಎರಡು ಸಾರಿ ಕೇಳಿದರೂ ಉತ್ತರ ಕೊಡದೆ ಬಾಯಿ ಮುಚ್ಚಿಕೊಂಡಿದ್ದಿಯೇಕೆ? ನಿನ್ನ ಕಂಠ ಬತ್ತಿ ಹೋಗಿಲ್ಲವಷ್ಟೇ?" ಎಂದನು ಕೋಪ ದಿಂದ ಮನೆಯ ಯಜಮಾನ.

"ಹೂಂ, ಕಡೆಗೂ ಏನು ನಿಮ್ಮ ಅಪ್ಪಣೆ?" ಎಂದನು ಭಿಕ್ಷುಕ.

"ನಿನಗೆ ಕೊಡಲು ನನ್ನ ಹತ್ತಿರ ಕುರುಡು ಕಾಸೂ ಇಲ್ಲ. ಬಾಯಿ ಮುಚ್ಚಿ ಎದ್ದು ಹೊರಟು ಹೋಗು" ಎಂದನು ಮನೆಯೊಡೆಯ. ಭಿಕ್ಷುಕನು "ಹೂಂ" ಎಂದು ಮೂಲುಗಿ, "ಹಾಗಾದರೆ ನನ್ನನ್ನು ಮತ್ತೆ ಕೆಳಗೆ ಕಳುಹಿಸಿಬಿಡಿರಯ್ಯಾ, ನಿಮ್ಮ ಪುಣ್ಯ" ಎಂದನು.

"ನನಗಿರ್ದೆ ಕೆಲಸವೇನು? ನಿನ್ನ ದಾರಿ ನೀನೇ ನೋಡಿಕೋ!" ಎಂದು ಮನೆಯ ಯಜಮಾನನು ಒಳಗೆ ಹೋಗಿ ಬಾಗಿಲು ಹಾಕಿಕೊಂಡನು.

ಕುರುಡು ಭಿಕ್ಷುಕನು ನಿಟ್ಟುಸಿರು ಬಿಡುತ್ತ ಎದ್ದು ತಡವಿಕೊಳ್ಳುತ್ತಾ ಮೆಟ್ಟಿಲಿನ ಬಳಿಗೆ ಹೋದನು. ಹಾಗೂ ಹೀಗೂ ಎಡವುತ್ತ ಅರ್ಧಭಾಗದಷ್ಟು ಮೆಟ್ಟಿಲು ಇಳಿಯುವಾಗ ಕಾಲು ಜಾರಿತು. ಮೂಲುಗುತ್ತ ಬಿಕ್ಕುತ್ತ ಹೇಗೋ ಇಳಿದು ಬೀದಿಗೆ ಮುಟ್ಟಿದನು.

ಅದೇ ಸಮಯಕ್ಕೆ ಉಳಿದಿಬ್ಬರು ಅವನ ಸ್ನೇಹಿತ ಭಿಕ್ಷುಕರೂ ಆ ಬೀದಿಗೆ ಬಂದು ಅವನನ್ನು ಸೇರಿದರು. ಮೂರನೆಯವನ ನರಳುವ ಶಬ್ದದಿಂದ ಅವನ ಗುರುತು ಹಿಡಿದು ಹತ್ತಿರ ಬಂದು, "ಏನಾಯಿತು ನಿನಗೆ?" ಎಂದು ಕೇಳಿದರು.

ಗಾಯಗೊಂಡವನು ತನ್ನ ಮಿತ್ರರೊಂದಿಗೆ ನಡೆದ ಸಮಾಚಾರವನ್ನೆಲ್ಲ ಹೇಳಿ, "ಈ ಹೊತ್ತು ನಾನು



ಇನ್ನು ತಿರುಗಲಾರೆ. ನಿಮ್ಮ ಹತ್ತಿರ ಒಂದು ದಿರಾಂ ಇದ್ದರೆ ಕೊಡಿರಿ. ಅಂಗಡಿಯಿಂದ ಏನಾದರೂ ಕೊಂಡುಕೊಂಡು ಹೊಟ್ಟೆ ತುಂಬಿಸಿಕೊಳ್ಳುತ್ತೇನೆ" ಎಂದು ಕೈ ನೀಡಿದನು.

"ನಮಗೂ ಈ ದಿನ ದುರ್ದಿನವೇ ಅಪ್ಪಾ. ಎಲ್ಲಿ ತಿರುಗಿದರೂ ಏನೂ ಸಿಗಲಿಲ್ಲ. ಬಾ, ಮನೆಗೆ ಹೋಗಿ ನೋಡಿಕೊಳ್ಳೋಣ" ಎಂದರು ಉಳಿದ ಇಬ್ಬರು ಕುರುಡರು.

ಆ ಭಿಕ್ಷುಕರ ಸಂಭಾಷಣೆಗಳನ್ನೆಲ್ಲಾ ಆ ಮನೆಯ ಯಜಮಾನನು ಮರೆಯಲ್ಲಿದ್ದು ಕೇಳಿಕೊಂಡಿದ್ದನು. ಅವನೊಬ್ಬ ಹಚ್ಚಹಸಿಯ ಕಳ್ಳನಾಗಿದ್ದ. ಮೂರನೇ ಮಾಳಿಗೆಯವರು ಬೀಗ ಹಾಕಿ ಊರಿಗೆ ಹೋಗಿರುವುದನ್ನು ತಿಳಿದು, ಕಳ್ಳತನ ಮಾಡಲು ಆ ಮನೆಯೊಳಗೆ ಪ್ರವೇಶಿಸಿದ್ದನು. ಕುರುಡು ಭಿಕ್ಷುಕ ಕೆಳಗಿಳಿಯುವಾಗ ಅವನೂ ಇಳಿದು ಬಂದಿದ್ದನು. ಆಮೇಲೆ ಮೂವರು ಕುರುಡರ ಹಿಂದೆಯೇ ಅವನೂ ಅವರ ಮನೆಗೆ ಹೋದನು.

ಬೇಗದಲ್ಲೇ ಮೂವರು ಭಿಕ್ಷುಕರೂ ತಮ್ಮ ಮನೆಯನ್ನು ತಲುಪಿ, ಬೀಗ ತೆಗೆದು ಒಳಗೆ ಹೋಗಿ ಕೂಡಲೇ ಬಾಗಿಲು ಹಾಕಿಕೊಂಡರು. ಅಷ್ಟರೊಳಗೆ ಕಳ್ಳನೂ ಸಹ ಒಳಗೆ ಸೇರಿಬಿಟ್ಟಿದ್ದನು.

ಕುರುಡರು ಪೆಟ್ಟಿಗೆಯನ್ನು ತೆರೆದು ತಾವು ಸೇರಿಸಿಟ್ಟ ಹಣವನ್ನು ಲೆಕ್ಕ ಮಾಡತೊಡಗಿದರು. ಹನ್ನೆರಡು ನೂರು ಬೆಳ್ಳಿಯ ದಿರಾಂಗಳಿದ್ದುವು. ಅವುಗಳಿಂದ ಒಂದನ್ನು ತೆಗೆದು ಒಬ್ಬ ಕುರುಡನು ರೊಟ್ಟಿಗಳನ್ನೂ ನಂಜಿಕೊಳ್ಳಲು ಚಟ್ನಿ ಪಲ್ಯಗಳನ್ನೂ ತೆಗೆದುಕೊಂಡು ಬಂದನು. ಮೂವರೂ ಕುಳಿತುಕೊಂಡು ತಿನ್ನತೊಡಗಿದರು. ಆಗ ಅವರ ಪಕ್ಕದಲ್ಲಿದ್ದ ಕಳ್ಳನೂ ತಿನ್ನತೊಡಗಿದನು.

"ಅಯ್ಯಯ್ಯೋ! ನಾಲ್ಕು ಮಂದಿ ಅಗಿಯುವ ಶಬ್ದ ಕೇಳುತ್ತಾ ಇದೆ. ನಾಲ್ಕನೆಯವನು ಯಾರು? ಕಳ್ಳಾ! ಕಳ್ಳಾ!" ಎಂದನು ಒಬ್ಬ ಕುರುಡ.

ಮರುಕ್ಷಣದಲ್ಲಿ ಅವರು "ಕಳ್ಳ! ಕಳ್ಳ!" ಎಂದು ಕೂಗತೊಡಗಿದರು.



ಆ ಕೂಗನ್ನು ಕೇಳಿ ನಾಲ್ಕಾರು ಮಂದಿ ಅಲ್ಲಿ ಬಂದು ಕೂಡತೊಡಗಿದರು. ಕಳ್ಳನು ಕೂಡಾ ಕುರುಡನೇ ಎಂಬಂತೆ ಕಣ್ಣುಮುಚ್ಚಿ ತಡವರಿಸುತ್ತಾ "ಅಯ್ಯಾ, ದೊರೆಗಳೇ! ನಮ್ಮನ್ನು ಕೋತ್ವಾಲರ ಕಡೆ ಕರೆದುಕೊಂಡು ಹೋಗಿ ಪುಣ್ಯ ಕಟ್ಟಿಕೊಳ್ರಪ್ಪಾ. ಅವರೊಡನೆ ಸತ್ಯ ಸಂಗ್ತಿ ಗುಟ್ಟಾಗಿ ಹೇಳಿಬಿಡುತ್ತೇವೆ" ಎಂದು ಕೂಗಿದನು.

ಜನರು ನಾಲ್ವರು ಕುರುಡರನ್ನೂ ಕೋತ್ವಾಲ ಕಚೇರಿಗೆ ಎಳೆದುಕೊಂಡು ಹೋದರು.

ಕೋತ್ವಾಲನು ಅವರನ್ನು ನೋಡಿ, "ಯಾರು ಇವರು? ಏಕೆ ಬಂದಿದ್ದಾರೆ? ಏನಾಯಿತು?" ಎಂದು ಕೇಳಿದನು.

"ಅಯ್ಯಾ! ನಾವು ಮೂವರೂ ಕುರುಡು ಭಿಕ್ಷುಕರು. ಯಾವನೋ ಒಬ್ಬ ಕಳ್ಳ ನಮ್ಮ ಮನೆಯೊಳಗೆ ಹೊಕ್ಕು ನಾವು ಕಷ್ಟಪಟ್ಟು ಸಂಪಾದಿಸಿದ ಸೊತ್ತನ್ನೆಲ್ಲಾ ಕದ್ದುಕೊಳ್ಳಲು ನೋಡುತ್ತಾನೆ" ಎಂದ ಕುರುಡರಲ್ಲಿ ಒಬ್ಬ.

"ಯಾರು ಆ ಕಳ್ಳ? ಎಲ್ಲಿದ್ದಾನೆ? ನಿಜ ಹೇಳು" ಎಂದನು ಕೋತ್ವಾಲ.

"ಸುರಳೀ ಬೆತ್ತದ ಬಿಸಿ ತಾಗದೆ ನಿಜ ಹೇಳುತ್ತೇವೆಯೇ ದೊರೆಗಳೇ?" ಎಂದನು ಕಣ್ಣು ಮುಚ್ಚಿಕೊಂಡಿದ್ದ ಕಳ್ಳ ಕುರುಡ.

"ಓಹೋ! ನಿಜ ಹೇಳುವವರೆಗೂ ಇವನನ್ನು ಹೊಡೆಯಿರಿ!" ಎಂದನು ಕೋತ್ವಾಲ ಭಟರೊಂದಿಗೆ.

ಎರಡು ಪೆಟ್ಟು ಬಿತ್ತೋ ಇಲ್ಲವೋ, ಕಳ್ಳನು ಥಕ್ಕನೆ ಕಣ್ಣು ತೆರೆದು "ಕ್ಷಮಿಸಬೇಕು ದೊರೇ! ಸತ್ಯ ಹೇಳ್ತೇನೆ. ನನ್ನನ್ನು ಕ್ಷಮಿಸಿ ಬಿಟ್ಟುಬಿಡಿರಿ. ನಿಮ್ಮ ದಮ್ಮಯ್ಯ. ನಾವು ನಾಲ್ವರೂ ಕುರುಡರ ಹಾಗೇ ನಟಿಸಿಕೊಂಡು ನಗರದಲ್ಲಿ ಭಿಕ್ಷೆ ಎತ್ತಿ ಹನ್ನೆರಡು ನೂರು ಬೆಳ್ಳಿ ದಿರಾಂ ಸಂಪಾದಿಸಿಟ್ಟಿದ್ದೇವೆ. ಸತ್ಯ ಹೇಳಿದಂಥವನಾದ ನನಗೆ ನನ್ನ ಭಾಗ ಕೊಡಿಸಬೇಕು. ಚೆನ್ನಾಗಿ ನಾಲ್ಕು ತಗುಲಿಸಿದಿರಾದರೆ ಉಳಿದವರು ಕೂಡಾ ನಿಜವನ್ನು ಒಪ್ಪಿಕೊಳ್ಳುತ್ತಾರೆ" ಎಂದನು ಅಳುಗೊರಲಿನಿಂದ.

ಕೋತ್ವಾಲನು ಅವನ ಮಾತುಗಳನ್ನು ನಂಬಿ, ಉಳಿದ ಮೂವರಿಗೆ ಎಷ್ಟು ಹೊಡೆಸಿದರೂ, ನಿಜವಾದ ಕುರುಡರಾಗಿದ್ದ ಅವರು ಕಣ್ಣು ತೆರೆಯಲೇ ಇಲ್ಲ, ಕಡೆಗೆ ಅವರೆಲ್ಲ ಬೋದ ತಪ್ಪಿ ಬಿದ್ದರು. ಕೋತ್ವಾಲನು ಸತ್ಯಸಂಧ ಕಳ್ಳನ ಮಾತಿನಂತೆ ಕುರುಡರ ಮನೆಯಿಂದ ಸೇರಿಸಿಟ್ಟ ಧನವನ್ನು ತರಿಸಿ, ಮುನ್ನೂರು ದಿರಾಂಗಳನ್ನು ಕಳ್ಳನಿಗೆ ಕೊಟ್ಟು, ಉಳಿದುವನ್ನು ತಾನೇ ಇಟ್ಟುಕೊಂಡು, "ಮೊಂಡು ಕುರುಡರು ಕಣ್ಣು ಬಿಡಿಸಿ ಬಂದು ಕೇಳುವವರೆಗೂ ಕೊಡಲಾರೆ!" ಎಂದು ಹೇಳಿ ಅವರನ್ನು ಸುಮ್ಮನೆ ಬಿಟ್ಟನು.





# ಅಮೃತಸಿದ್ಧಿ

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ, ಚಿರಾಯು ಎಂಬವನು ಅವನ ಸಾಮಂತ ರಾಜನಾಗಿದ್ದನು. ಈ ಚಿರಾಯುವಿನ ಮುಖ್ಯಮಂತ್ರಿ ಯಾಗಿ ಬೋಧಿಸತ್ವನು ಅವತರಿಸಿ, ನಾಗಾರ್ಜುನನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು.

ಮುಖ್ಯಮಂತ್ರಿಯಾದ ನಾಗಾರ್ಜುನನಿಗೆ ಅಷ್ಟು ದೊಡ್ಡ ಹೆಸರು ಬರಲು ಅವನ ದಾನಶೀಲತೆಗಳು ಪ್ರಜೆಗಳಿಗೆಲ್ಲಾ ಅನುಭವ ವೇದ್ಯವಾಗಿದ್ದುವು. ಇದರ ಮೇಲೆ ಅವನು ರಸಾಯನಶಾಸ್ತ್ರದಲ್ಲಿಯೂ, ಔಷಧೀ ಜ್ಞಾನದಲ್ಲಿಯೂ ಮಹಾನಿಧಿಯಾಗಿದ್ದನು. ಅವನು ತನಗೆ ತಿಳಿದ ರಾಸಾಯನಿಕ ಪ್ರಯೋಗದಿಂದ ಒಂದು ರಹಸ್ಯವಾದ ಯೋಗವನ್ನು ಕಂಡು ಹಿಡಿದು,ಮೊದಲು ತಾನು ಉಪಯೋಗಿಸಿ ಫಲಿತವನ್ನು ಕಂಡುಕೊಂಡು, ಅದನ್ನು ರಾಜನಿಗೂ ಕೊಟ್ಟನು. ಇದರಿಂದ.ಅವನಿಗೂ ರಾಜನಿಗೂ ಜರಾಮರಣಗಳಿಲ್ಲದಂತಾಯಿತು

ಒಂದು ದಿನ ನಾಗಾರ್ಜುನನ ಕುಮಾರರಲ್ಲಿ ಅವನಿಗೆ ಹೆಚ್ಚು ಪ್ರೇಮಾಸ್ಪದನೆನಿಸಿದ ಸೋಮದೇವನೆಂಬ ಮಗನು ಅಕಸ್ಮಾತ್ ಮರಣಕ್ಕೆ ತುತ್ತಾದನು. ಕುಮಾರನ ಸಾವಿನಿಂದ ನಾಗಾರ್ಜುನನಿಗೆ ಅಪಾರ ವಾದ ದುಃಖವಾಯಿತು. ಸಹಜವಾಗಿಯೇ ಕರುಣಾಳು ವಾದ ನಾಗಾರ್ಜುನನು, "ಪ್ರೀತಿಯ ಮಗನು ಸತ್ತರೆ ನನಗೆ ದುಃಖವಾಗುವ ಹಾಗೆಯೇ ಪ್ರಜೆಗಳಿಗೂ ಆಗುತ್ತದಷ್ಟೆ? ಆದುದರಿಂದ ಇನ್ನು ಮೇಲೆ ಲೋಕ ದಲ್ಲಿ ಮರಣವೆಂಬ ಮಾತೇ ಇರಕೂಡದು. ಮರಣ ದಿಂದ ಯಾರೂ ಅಳುವಂತಿರಬಾರದು. ಅದಕ್ಕೆ ತಕ್ಕ ಉಪಾಯ ಕಂಡು ಹಿಡಿಯಲೇ ಬೇಕು" ಎಂದು ಆಲೋಚಿಸಲು ತೊಡಗಿದನು.

"ರಸಾಯನಗಳು ಅಪಾರ ವ್ಯಯದಿಂದ ತಯಾರಿಸಲ್ಪಡುವಂತಹುದು. ಆದುದರಿಂದ ಸಾಮಾನ್ಯರಿಗೆಲ್ಲಾ ಎಟುಕುವ ಹಾಗೆ ಮೂಲಿಕೆ ಗಳಿಂದಲೇ ಅಮೃತೌಷಧವನ್ನು ತಯಾರಿಸಬೇಕು. ಆಗ ತಾನೇ ಪ್ರಜೆಗಳೆಲ್ಲಾ ಮರಣದ ಶೋಕಕ್ಕೆ ಒಳಗಾಗುವುದಿಲ್ಲ" ಎಂದು ನಾಗಾರ್ಜುನನು ನಿಶ್ಚಯಿಸಿದನು. ಆ ಪ್ರಕಾರ ನಾಗಾರ್ಜುನನು ಬಗೆ ಬಗೆಯ ಮೂಲಿಕೆಗಳ ಸಂಪುಟಗಳಿಂದ ಅಮೃತವನ್ನು ತಯಾರಿಸಲು ತೊಡಗಿದನು. ತನಗೆ ತಿಳಿದ ಶಾಸ್ತ್ರ ಜ್ಞಾನವೆಲ್ಲವನ್ನೂ ಉಪಯೋಗಿಸಿ ಅನೇಕ ಸಂಶೋಧನೆ ಗಳನ್ನು ನಡೆಸಿದನು. ಎಲ್ಲಾ ಪ್ರತಿಕ್ರಿಯೆಗಳೂ ಪೂರ್ತಿ

ಯಾಮುವು. ನಾಗಾರ್ಜುನನ ಕೆಲಸವು ಕೊನೆಯ ಹಂತಕ್ಕೆ ಬಂದಿತು. ಇನ್ನು 'ಅಮೃತಕಲ್ಪ' ಎಂಬ ಮೂಲಿಕೆಯೊಂದನ್ನು ತಂದು ಅದಕ್ಕೆ ಸೇರಿಸಿಬಿಟ್ಟರೆ ಮುಗಿಯುತ್ತದೆ. ಅಷ್ಟರಲ್ಲಿ ಈ ಸಮಾಚಾರ ದೇವೇಂದ್ರನಿಗೆ ಗೊತ್ತಾಯಿತು. ಕೂಡಲೇ ದೇವೇಂದ್ರನು ಅಶ್ವಿನೀ ದೇವತೆಗಳನ್ನು ಕರೆದು, "ನೀವು ಈಗಿಂದೀಗಲೇ ಭೂಲೋಕಕ್ಕೆ ಹೋಗಿ, ನಾಗಾರ್ಜುನನು ತಲೆಹಾಕಿದ ಅಮೃತಯೋಗವು ಸಿದ್ಧಿಗೆ ಮುಟ್ಟದಂತೆ ಮಾಡಲೇಬೇಕು. ಸಾಮ, ದಾನ, ಭೇದ, ಕಡೆಗೆ ದಂಡೋಪಾಯವನ್ನಾದರೂ ಉಪಯೋಗಿಸಿ ಕಾರ್ಯ ಸಾಧಿಸಬೇಕು. ಉಳಿದ ಕೆಲಸ ನಾನು ನೋಡಿಕೊಳ್ಳುತ್ತೇನೆ" ಎಂದನು.

ದೇವೇಂದ್ರನ ಆಜ್ಞೆಯಂತೆ ಅಶ್ವಿನೀ ದೇವತೆಗಳು ಮಾರುವೇಷಗಳಿಂದ ಭೂಮಿಗೆ ಇಳಿದು, ನಾಗಾರ್ಜುನನ ದರ್ಶನಮಾಡಿ, ಕುಶಲ ಪ್ರಶ್ನೆಗಳೆಲ್ಲ ಮುಗಿದ ಮೇಲೆ, "ಮಹಾಮಂತ್ರಿಯುವರೇ, ರಾಜ್ಯಗಳನ್ನೆಲ್ಲಾ ತಲೆಕೆಳಗೆ ಮಾಡಬಲ್ಲಂತಹ ಶಕ್ತಿ ಯುಕ್ತಿ ಬುದ್ಧಿಮತ್ತೆಗಳಿಂದ ಕೂಡಿದ ಘನಶಾಲಿಗಳಾದ ನಿಮಗೆ ತಿಳಿಯದ ವಿಷಯವೆಂಬುದೇನಿಲ್ಲ. ವಿಪರೀತ ದಯಾ ಗುಣದಿಂದ ಮೋಹವು ಆಕ್ರಮಿಸಿ, ಬ್ರಹ್ಮ ಸಂಕಲ್ಪಕ್ಕೆ ವಿರೋಧವಾದ ಕಾರ್ಯಮಾಡಲು ಈಗ ನೀವು ಇಳಿದಿದ್ದೀರಿ. ಮಾನವರಿಗೆ ಧರ್ಮಪ್ರಕಾರ ಕಾಲಗಣನೆಯೊಂದಿದೆಯಷ್ಟೆ? ಈಗ ನೀವು ಮಾಡುವ ಅಮೃತಸಿದ್ಧಿಯಿಂದ, ಮಾನವರ ಕಾಲಗತಿಯನ್ನು ಪ್ರತಿಬಂಧಿಸಿಬಿಟ್ಟರೆ, ಸೃಷ್ಟಿ ಪರಿಪಾಲನೆಯೇ ತಾರುಮಾರಾಗಿ ಹೋಗುತ್ತದೆ. ಮಾನವರಾರೂ ಸಾವೇ ಇಲ್ಲದೆ ಉಳಿದುಹೋದರೆ, ಯಾವ ಲೋಕಗಳಿಗೂ ಚಲನೆಯಿಲ್ಲದೆ ಹೋಗುತ್ತದೆ. ಅದರ ಮೇಲೆ ದೇವತೆಗಳು ಮಾಡಬೇಕಾದ ಈ ಕಾರ್ಯವನ್ನು ಮಾನವ ಮಾತ್ರರಾದ ನೀವೇ ಸಾಧಿಸಿಬಿಟ್ಟರೆ ದೇವತೆಗಳಿಗೂ, ಮಾನವರಿಗೂ ವ್ಯತ್ಯಾಸವೇನಾದರೂ ಇದೆಯೆ? ಇದಿಷ್ಟಕ್ಕೂ ಕಾರಣ ನಿಮ್ಮ ಮಗನೊಬ್ಬ ಸತ್ತುಹೋದುದೇ ಅಲ್ಲವೇ? ನಿಮ್ಮ ಮಗನು ಭೂಲೋಕದಲ್ಲಿ ಇಲ್ಲದೆ ಹೋದರೂ ಸ್ವರ್ಗಲೋಕದಲ್ಲಿ ಸುಖವಾಗಿಯೇ ಇದ್ದಾನೆ"



ಎಂದು ಧರ್ಮಬೋಧೆ ಮಾಡಿದರು. ಈ ಮಾತುಗಳಾವುದೂ ನಾಗಾರ್ಜುನನಿಗೆ ಅಷ್ಟೇನೂ ತೃಪ್ತಿಗೊಳಿಸಲಿಲ್ಲವಾದರೂ. "ನೋಡುತ್ತೇನೆ" ಎಂದಷ್ಟೇ ಹೇಳಿ ಅವರನ್ನು ಕಳುಹಿಸಿ, ತಾನು ಮಾಡುವ ಕೆಲಸವು ತಪ್ಪೋ ಸರಿಯೋ ಎಂದು ತನ್ನೊಳಗೇ ಆಲೋಚಿಸಲು ತೊಡಗಿದನು.

ಆ ಸಮಯದಲ್ಲಿ ಚಿರಾಯುವಿನ ಪುತ್ರನಾದ ಜಯಸೇನನಿಗೆ ಯುವರಾಜ ಪಟ್ಟಾಭಿಷೇಕಮಾಡಲು, ದೊಡ್ಡ ರೀತಿಯಲ್ಲಿ ಏರ್ಪಾಡು ನಡೆಯುತ್ತಿತ್ತು. ಶುಭ ಮುಹೂರ್ತದ ವೇಳೆಯಲ್ಲಿ ಮಹಾಸಭೆ ತುಂಬಿ ತುಳುಕುತ್ತಿತ್ತು. ಈ ವೇಳೆಗೆ ಸರಿಯಾಗಿ ವೃದ್ಧಬ್ರಾಹ್ಮಣನ ರೂಪದಲ್ಲಿ ಭೂಮಿಗೆ ಬಂದ ದೇವೇಂದ್ರನು, ಯುವರಾಜ ಜಯಸೇನನ ಬಳಿಗೆ ಬಂದು, ರಹಸ್ಯವಾಗಿ ಹೀಗೆಂದನು : "ಜಯಸೇನಾ, ನಿಮ್ಮ ಮಂತ್ರಿ ನಾಗಾರ್ಜುನನು ತಯಾರಿಸಿದ ರಸಾಯನ ಸೇವನೆಯಿಂದ, ನಿನ್ನ ತಂದೆಗೆ ಜರಾಮರಣಗಳಿಲ್ಲವೆಂಬ ಸಂಗತಿ ನಿನಗೆ ಗೊತ್ತಿಲ್ಲವೇ? ಹಾಗಿರುವಾಗ ನೀನು ಎಂದೆಂದಿಗೂ ಕೇವಲ ಯುವರಾಜನಾಗಿಯೇ ಇರಬೇಕಲ್ಲದೆ ಎಂದಿಗೂ ರಾಜನಾಗಲು ಸಾಧ್ಯವಿಲ್ಲ".

ಈ ಮಾತನ್ನು ಕೇಳಿದಾಗ, ಜಯಸೇನನ ಮುಖವು ಚಿಂತೆಯಿಂದ ಬಾಡಿ ಹೋಯಿತು. ಆಗ ಆ ವೃದ್ಧ ಬ್ರಾಹ್ಮಣನು, "ಅಪ್ಪಾ, ಅದಕ್ಕಾಗಿ ಚಿಂತಿಸುವುದೇನೂ ಬೇಡ. ನಿನಗೆ ತಂದೆಯ ನಿಜವಾದ ಅಧಿಕಾರವು ಸಿಗಬೇಕಾದರೆ ಸುಲಭವಾದ ಉಪಾಯ ಒಂದಿದೆ. ನಿಮ್ಮ ಮಹಾಮಂತ್ರಿ ನಾಗಾರ್ಜುನನು. ದಿನಾ ಭೋಜನಕ್ಕೆ ಕೂಡುವ ಮೊದಲು ಯಾರೇನು ಕೇಳಿದರೂ ಇಲ್ಲವೆನ್ನದೆ ಕೊಡುವುದನ್ನು ವ್ರತವಾಗಿ ಹಿಡಿದಿದ್ದಾನೆ. ನಾಳೆ ನೀನು ಊಟದ ಮೊದಲು ಆತನ ಬಳಿಗೆ ಹೋಗಿ ಒಂದಿಷ್ಟೂ ಶಂಕಿಸದೆ 'ನಿಮ್ಮ ತಲೆ ನನಗೆ ಕೊಡಬೇಕು' ಎಂದು ಕೇಳು. ಆಮೇಲೆ ಏನು ನಡೆಯುತ್ತದೆಂದು ನಿನಗೇ ಗೊತ್ತಾಗುತ್ತದೆ" ಎಂದು ಹೇಳಿ ಜಯಸೇನನನ್ನು ಒಪ್ಪಿಸಿದನು.

ರಾಜ್ಯಾರ್ಹತೆಯುಳ್ಳವನಾದ ಜಯಸೇನನು ಮರುದಿನ, ನಾಗಾರ್ಜುನನ ಊಟದ ವೇಳೆಯನ್ನು ನೋಡಿ



ಕೊಂಡು. ಅವನ ಬಳಿಗೆ ಹೋಗಿ ವೃದ್ಧನು ಹೇಳಿಕೊಟ್ಟಂತೆಯೇ ಅವನ ತಲೆಯನ್ನು ದಾನ ಕೇಳಿದನು.

ನಾಗಾರ್ಜುನನು ಸ್ವಲ್ಪವೂ ಸಂಶಯಪಡದೆ ತನ್ನ ಕತ್ತಿಯನ್ನು ಜಯಸೇನನ ಕೈಗೆ ಕೊಟ್ಟು "ತೆಗೆದುಕೋ ಅಪ್ಪಾ, ನೀನೇ ಕಡಿದು ತೆಗೆದುಕೋ" ಎಂದನು. ರಸಾಯನ ಪ್ರಭಾವದಿಂದ ನಾಗಾರ್ಜುನನ ಶರೀರವು ವಜ್ರಕಾಯವಾಗಿದ್ದುದರಿಂದ, ಜಯಸೇನನು ಎಷ್ಟು ಸಾರಿ ಕಡಿದರೂ ಕಲ್ಲಿನ ಮೇಲೆ ಹೊಡೆದಂತಾಯಿತು. ಕತ್ತಿ ಒಡ್ಡಾಗಿ ವಕ್ರವಾಯಿತೇ ಹೊರತು ಕುತ್ತಿಗೆ ತುಂಡಾಗಲೇ ಇಲ್ಲ.

ಈ ಸಮಾಚಾರವು ಕ್ಷಣಮಾತ್ರದಲ್ಲಿ ರಾಜನಿಗೆ ಗೊತ್ತಾಗಿ, ಅವನು ಮಗನ ಬಳಿಗೆ ಓಡೋಡಿ ಬಂದನು. ಮಗನು ಮಾಡಲಿರುವ ಕೆಲಸವನ್ನು ನೋಡಿ, "ತಪ್ಪು ತಪ್ಪು" ಎನ್ನುತ್ತಾ ತಡೆಯಲು ನೋಡಿದನು.

ಆಗ ನಾಗಾರ್ಜುನನು "ಮಹಾರಾಜಾ, ಯುವರಾಜನಿಗೆ ಇಂತಹ ಕೋರಿಕೆ ಬರುವುದರ ಪೂರ್ವಾಪರ ವಿಚಾರಗಳೆಲ್ಲ ನನಗೆ ಗೊತ್ತು. ಇವನು ನಿಮಿತ್ತ ಮಾತ್ರನಾಗಿರುವವನು. ಆದುದರಿಂದ ಇವನನ್ನು ತಡೆಯಬಾರದು. ಕಳೆದ ಜನ್ಮದಲ್ಲಿ ನಾನು ತೊಂಬತ್ತೊಂಬತ್ತು ಸಾರಿ ನನ್ನ ತಲೆಯನ್ನು ಕಡಿದು ಇವನಿಗೆ ಕೊಟ್ಟಿದ್ದೇನೆ. ಇದು ನೂರನೆಯ ಋಣ ಶೇಷ. ಈ ಒಂದು ಅಲ್ಪವಿಷಯಕ್ಕಾಗಿ ಹಿಂಜರಿದೆನೆಂಬ ಅಪಕೀರ್ತಿ ನನಗೆ ಬಾರದಂತೆ ನೋಡುವ ಭಾರವು ನಿನ್ನ ಮೇಲೆಯೇ ಇದೆ. ನಿನ್ನ ಅಪ್ಪಣೆಗಾಗಿಯೇ ಕಾದಿದ್ದೆನು" ಎಂದು ಹೇಳಿ ಭಕ್ತಿಯಿಂದ ರಾಜನನ್ನು ಆಲಿಂಗನ ಮಾಡಿಕೊಂಡನು.

ಆಮೇಲೆ ನಾಗಾರ್ಜುನನು ತನ್ನ ಬಳಿಯಲ್ಲಿದ್ದ ಒಂದು ಮೂಲಿಕೆಯನ್ನು ತೆಗೆದು ಕತ್ತಿಗೆ ತಿಕ್ಕಿ, ಜಯಸೇನನಿಗೆ ನೀಡಿ, "ಈಗ ಕಡಿಯಪ್ಪಾ" ಎಂದನು.

ಜಯಸೇನನು ಈಸಾರಿ ಕತ್ತಿಯಿಂದ ಸುಲಭವಾಗಿ ಕಡಿಯಲು, ತೊಟ್ಟಿನಿಂದ ಬೇರ್ಪಟ್ಟು ಬೀಳುವ ಕಮಲದ ಹಾಗೆ ನಾಗಾರ್ಜುನನ ತಲೆ ಕೆಳಗೆ ಬಿತ್ತು.

ಆ ದೃಶ್ಯವನ್ನು ನೋಡಲಾಗದೆ ರಾಜನು ಕೂಡಾ ಪ್ರಾಣತ್ಯಾಗಮಾಡಲು ಸಿದ್ಧನಾದನು. ಅದನ್ನು ನೋಡಿ ಕೆಳಗೆ ಬಿದ್ದ ನಾಗಾರ್ಜುನನ ತಲೆ "ಇದಕ್ಕಾಗಿ ಚಿಂತಿಸಬೇಡ ರಾಜಾ. ಎಲ್ಲಾ ಜನ್ಮಗಳಲ್ಲಿಯೂ ನಾನು ನಿನ್ನೊಂದಿಗೇ ಇರುತ್ತೇನೆಂದು ತಿಳಿ" ಎಂದು ಹೇಳಿ ಸ್ತಬ್ಧವಾಯಿತು.

ಆ ಕ್ಷಣದಿಂದ ರಾಜನು ಪೂರ್ತಿ ವಿರಾಗಿಯಾದನು. ಮಗನಿಗೆ ಪಟ್ಟಾಭಿಷೇಕಮಾಡಿ, ತಾನು ತಪಸ್ಸು ಮಾಡಲು ಅರಣ್ಯಕ್ಕೆ ಹೊರಟುಹೋದನು.

ಈ ವಿಧವಾಗಿ ಜಯಸೇನನು ರಾಜನಾಗುವುದರೊಂದಿಗೆ, ದೇವೇಂದ್ರನ ಉದ್ದೇಶವೂ ನೆರವೇರಿತು.





# ಮುಹಮ್ಮದ್-ಬಿನ್-ತುಗ್ಲಕ್

ಕ್ರಿ. ಶ. ೧೩೨೦ ರಲ್ಲಿ ಢಿಲ್ಲಿಯ ಅಧಿಕಾರವು ತುಗ್ಲಕ್ ವಂಶ ಸ್ಥಾಪಕನಾದ ಘಿಯಾಜುದ್ದೀನನ ಕೈವಶವಾಯಿತು. ಅವನು ಸಿಂಹಾಸನವನ್ನು ಅಧಿಷ್ಠಿಸುವಾಗ ವೃದ್ಧನಾಗಿದ್ದನು. ಅವನು ಬಂಗಾಳದಿಂದ ಹಿಂದಿರುಗುತ್ತಿದ್ದಾಗ, ಅವನನ್ನು ಸ್ವಾಗತಿಸಲು ಢಿಲ್ಲಿಗೆ ಸಮೀಪದಲ್ಲಿ ಅಲಂಕರಿಸಲ್ಪಟ್ಟ ದ್ವಾರ ತೋರಣದ ಏರ್ಪಾಡಾಗಿತ್ತು.

ಘಿಯಾಜುದ್ದೀನ್ ಢಿಲ್ಲಿಗೆ ಸಮೀಪಿಸುತ್ತಿದ್ದಾಗ, ನಿಜಾಮುದ್ದೀನ್ ಎಂಬ ಪ್ರಸಿದ್ಧ ಫಕೀರನೊಬ್ಬನು "ಸುಲ್ತಾನನಿಗೆ ಢಿಲ್ಲಿ ಇನ್ನೂ ಬಹಳದೂರದಲ್ಲಿದೆ" ಎಂದು ಹೇಳಿದನು. ಆ ಮಾತು ಅಕ್ಷರಶಃ ನಿಜವಾಯಿತು !





ಘಿಯಾಜುದ್ದೀನ್ ದ್ವಾರ ತೋರಣದ ಕೆಳಗೆ ಬಂದ ಕೂಡಲೇ ಅದು ಮುರಿದು ಅವನ ಮೇಲೆ ಬಿತ್ತು. ಅವನು ಅಲ್ಲಿಯೇ ಸತ್ತನು. ಸುಲ್ತಾನನ ಮರಣವು ಆಕಸ್ಮಿಕ ಅವಘಡದಿಂದಾದಂತೆ ಕಂಡರೂ ಅದು ಅವನ ಕುಮಾರ ಉಲೂಘ್ ಖಾನ್ ಮಾಡಿದ ದುಸ್ತಂತ್ರವೆಂದು ಹಲವರು ಭಾವಿಸಿದರು.



ಆ ಮೇಲೆ ಉಲೂಘ್‌ಖಾನ್, ಮಹಮ್ಮದ್-ಬಿನ್-ತುಗ್ಲಕ್ ಎಂಬ ಹೆಸರಿನಿಂದ ಢಿಲ್ಲಿಯ ಸುಲ್ತಾನನಾದನು. ಚಂಚಲ ಗುಣದವನಾದ ಈ ತುಗ್ಲಕ್ ತನ್ನ ರಾಜಧಾನಿಯನ್ನು ಢಿಲ್ಲಿಯಿಂದ ದೇವಗಿರಿಗೆ ಬದಲಾಯಿಸಬೇಕೆಂದು ನಿಶ್ಚಯಿಸಿದನು. ಢಿಲ್ಲಿಗೆ ಏಳ್ನೂರು ಮೈಲು ದೂರದಲ್ಲಿರುವ ದೇವಗಿರಿಗೆ ದೌಲತಾಬಾದ್ ಎಂದು ಹೆಸರಿಟ್ಟು, ಅಲ್ಲಿ ಕೋಟೆ ಕೊತ್ತಳ ಭವನಗಳನ್ನು ನಿರ್ಮಾಣ ಮಾಡಿಸಿದನು.

ಪ್ರಭುತ್ವ ಕಾರ್ಯಾಲಯಗಳನ್ನು ಮಾತ್ರವಲ್ಲದೆ ಢಿಲ್ಲಿಯ ಪೌರರೆಲ್ಲರನ್ನೂ ದೌಲತಾಬಾದಿಗೆ ಕರೆದೊಯ್ಯಲು ಆಜ್ಞೆ ಮಾಡಿದನು. ತಲೆತಲಾಂತರಗಳಿಂದ ವಾಸವಾಗಿದ್ದ ಪ್ರಾಂತವನ್ನೂ, ಆಸ್ತಿಪಾಸ್ತಿಗಳನ್ನೂ ಬಿಡಲು ಢಿಲ್ಲಿಯ ಪ್ರಜೆಗಳು ಒಪ್ಪದೆ ಹೋದರು.





ಸುಲ್ತಾನನ ಆಜ್ಞೆಯನ್ನು ತಿರಸ್ಕರಿಸುವ ಪ್ರಜೆಗಳನ್ನು ಬೆದರಿಸಿ ಬಲಾತ್ಕಾರದಿಂದ ದೌಲತಾಬಾದಿಗೆ ಸಾಗಿಸತೊಡಗಿದರು. ಈ ಕಾರ್ಯದಲ್ಲಿ ಸೈನಿಕರು ಕುರುಡ ಕುಂಟರನ್ನು ಕೂಡಾ ಬಿಡಲಿಲ್ಲ. ಎಳೆದೊಯ್ಯುವ ಸೈನಿಕರ ಹಿಂಸೆಯಿಂದ ಅನೇಕರು ದಾರಿಯಲ್ಲೇ ಸತ್ತರು. ಹೀಗೆ ಪ್ರಾಚೀನ ಕಾಲದಿಂದ ಪ್ರಸಿದ್ಧವಾದ ಢಿಲ್ಲೀನಗರವು ನಿರ್ಮಾನುಷ್ಯವಾಯಿತು.

ದೌಲತಾಬಾದಿನಲ್ಲಾದರೂ ಪ್ರಜೆಗಳ ಜೀವನವು ಸುಗಮವಾಗಲಿಲ್ಲ. ಅಧಿಕಾರಿಗಳಿಗೆ ಕೂಡಾ ಢಿಲ್ಲೀ ನಗರವೇ ಒಳ್ಳೆಯದೆನಿಸಿತು. ಅನೇಕ ಅಡೆತಡೆಗಳಿಂದ ಸುಲ್ತಾನನಿಗೂ ನೂತನ ರಾಜಧಾನಿ ಹಿಡಿಸಲಿಲ್ಲ. ಇದ್ದಕ್ಕಿದ್ದ ಹಾಗೆ ಪ್ರಜೆಗಳೆಲ್ಲಾ ಮತ್ತೆ ಢಿಲ್ಲಿಗೇ ಹಿಂದಿರಗಬೇಕೆಂದು ಸುಲ್ತಾನನ ಆಜ್ಞೆ ಹೊರಟಿತು. ಎಲ್ಲರಿಗೂ ಹಿಂದಿರುಗಿ ಹೋಗಬೇಕೆಂದಿದ್ದರೂ. ಸುಲ್ತಾನನ ಚಂಚಲ ಸ್ವಭಾವದಿಂದ ರೋಸಿದವರೆಲ್ಲರಿಗೂ ಕೋಪ ಬಂದಿತು.





ಬೇರೆ ಉಪಾಯವಿಲ್ಲದೆ ತಿರುಗು ಪ್ರಯಾಣವು ಪ್ರಾರಂಭವಾದರೂ ಅದು ಸಕ್ರಮವಾಗಿ ಸಾಗಲಿಲ್ಲ. ಅಷ್ಟು ದೂರ ನಡೆಯಲಾಗದೆ ಅನೇಕರು ದಾರಿಯಲ್ಲೇ ಸತ್ತು ಹೋದರು. ಮತ್ತೆ ಕೆಲವರು ದಾರಿಗಳ್ಳರಿಂದ ಪೂರ್ತಿ ದೋಚಲ್ಪಟ್ಟರು. ಅಳಿದುಳಿದವರಷ್ಟೇ ಢಿಲ್ಲಿಯನ್ನು ತಲಪಿದರು. ಅಲ್ಲಿ ಮನೆಗಳೆಲ್ಲಾ ಪಾಳುಬಿದ್ದಿದ್ದುವು. ದಿವಾಳಿಯಾದ ಸುಲ್ತಾನ್ ಪ್ರಭುತ್ವವು ಪ್ರಜೆಗಳು ಅಡಗಿಸಿಕೊಂಡಿದ್ದ ಅಲ್ಪ ಸ್ವಲ್ಪ ಧನವನ್ನೆಲ್ಲಾ ತಾನೇ ಎಳೆದುಕೊಂಡಿತು.

ಪ್ರಭುತ್ವದ ಖಜಾನೆ ಖಾಲಿಯಾದುದರ ಪರಿಣಾಮವಾಗಿ ಸುಲ್ತಾನನು ಚಿನ್ನಬೆಳ್ಳಿಗಳ ನಾಣ್ಯಗಳ ಸ್ಥಳದಲ್ಲಿ ತಾಮ್ರದ ನಾಣ್ಯಗಳನ್ನು ಪ್ರವೇಶಗೊಳಿಸಿದನು. ಅದನ್ನು ನೋಡಿ ಕೆಲವರು ತಮ್ಮ ಹತ್ತಿರವಿರುವ ತಾಮ್ರದ ಪಾತ್ರ ಪರಡಿಗಳನ್ನು ಕರಗಿಸಿ ತಾವೇ ಸ್ವಂತವಾಗಿ ನಾಣ್ಯಗಳ ತಯಾರಿಕೆಗೆ ತೊಡಗಿದರು. ಒಟ್ಟಿನಲ್ಲಿ ಆರ್ಥಿಕ ಸಂಕ್ಷೋಭೆಗೆ ಒಳಗಾದ ಸುಲ್ತಾನನು, ಪ್ರತ್ಯೇಕ ತೆರಿಗೆಗಳನ್ನು ಹಾಕಿದನು. ತೆರಿಗೆ ಕೊಡಲಾಗದವರು ನಾನಾ ಹಿಂಸೆಗಳಿಗೆ ಗುರಿಯಾದರು.






ಇದರೆಡೆಯಲ್ಲಿ ಸುಲ್ತಾನನು ರಾಜ್ಯದ ವಿಸ್ತರಣೆಗೂ ಪ್ರಯತ್ನಿಸಿ ಮೂರು ಲಕ್ಷದ ಎಪ್ಪತ್ತು ಸಾವಿರ ಸೈನಿಕರನ್ನು ಜಮೆ ಮಾಡಿದನು. ಮೊದಲು ಪರ್ಷಿಯಾ ದೇಶಕ್ಕೆ ದಂಡೆತ್ತಬೇಕೆಂದಿದ್ದನು. ಮತ್ತೆ ಆ ಉದ್ದೇಶವನ್ನು ಬಿಟ್ಟು, ಕುಮಾನ್ ಪ್ರಾಂತದ ಚಿಕ್ಕ ಚಿಕ್ಕ ರಾಜ್ಯಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳುವುದು ಸುಲಭವೆಂದುಕೊಂಡು, ಪರ್ವತ ಪ್ರಾಂತದ ಕಡೆಗೆ ಸೈನ್ಯವನ್ನು ಸಾಗಿಸಿದನು.

ಆದರೂ ಕಾಲವು ಕೂಡಿಬರಲಿಲ್ಲ. ಆಗಲೇ ವರ್ಷಾಕಾಲವು ಪ್ರಾರಂಭವಾಗಿ, ತುಫಾನಿನ ಹೊಡೆತಕ್ಕೆ ಗಿರಿಶಿಖರಗಳು ಮುರಿದು ಸೈನ್ಯದ ಮೇಲೆ ಬೀಳ ತೊಡಗಿದುವು. ಆ ಪ್ರಾಂತಗಳನ್ನು ಆಳುವ ಸಣ್ಣ ಸಣ್ಣ ನಾಯಕರು ಕೂಡಾ ಈ ದುರಾಕ್ರಮಣವನ್ನು ಇದಿರಿಸಿ ನಾನಾ ಯಾತನೆಗೆ ಗುರಿಪಡಿಸಿದರು. ಈ ಕಷ್ಟಗಳಿಂದ ಬಹಳಮಂದಿ ಸೈನಿಕರು ಸತ್ತುಹೋದರು.





ಅವನ ಸಾಮ್ರಾಜ್ಯದಲ್ಲಿ ಪೂರಾ ತಿರುಗುದಾಳಿಗಳೂ, ಬಂಡಾಯಗಳೂ, ಎದ್ದುವು. ಸಿಂಧು ಪ್ರಾಂತದಲ್ಲೆದ್ದ ಬಂಡಾಯವನ್ನು ಅಡಗಿಸಲು ಹೋದ ಮುಹಮ್ಮದ್-ಬಿನ್-ತುಗ್ಲಕ್ ವಿಷಜ್ವರಕ್ಕೆ ತುತ್ತಾಗಿ ೧೩೫೧ರಲ್ಲಿ ತೀರಿಹೋದನು. ಚಿಕ್ಕ ಚಿಕ್ಕ ಸಾಮಂತರಾಜರು ಕೂಡಾ ಸ್ವಾತಂತ್ರ್ಯವನ್ನು ಪ್ರಕಟಿಸಿಕೊಂಡುದರಿಂದ ತುಗ್ಲಕ್ ಸಾಮ್ರಾಜ್ಯವು ಛಿನ್ನಾಭಿನ್ನವಾಯಿತು.

# ಶರಣಾಗತಿ

ಸಿಂಹಪುರಿಯೂ ವಜ್ರಪುರಿಯೂ ನೆರೆಹೊರೆಯ ರಾಜ್ಯಗಳಾಗಿದ್ದುವು. ಸಿಂಹಪುರಿಯೊಂದಿಗೆ ಹೋಲಿಸಿದರೆ ವಜ್ರಪುರಿ ತುಂಬಾ ಬಲಹೀನ ರಾಜ್ಯವಾಗಿತ್ತು. ಆದರೂ ರಾಜ್ಯಾಕಾಂಕ್ಷೆಯಿಂದ ವಜ್ರಗಿರಿ ರಾಜನಾದ ಕಾಲಕೇತು ಸಿಂಹಪುರಿಯ ರಾಜ ವೀರಸಿಂಹನೊಂದಿಗೆ ಯುದ್ಧಕ್ಕೆ ಕಲೆತು ಅನೇಕ ಸಾರಿ ಸೋತುಹೋಗಿದ್ದನು.

ಏನಾದರೂ ಕುತಂತ್ರದಿಂದ ವೀರಸಿಂಹನನ್ನು ಬಂಧಿಸಬೇಕೆಂದು ಕಾಲಕೇತು ಆಲೋಚಿಸಿದನು. ಅವನು ಒಬ್ಬ ದೂತನನ್ನು ವೀರಸಿಂಹನ ಬಳಿಗೆ ಕಳುಹಿಸಿ, ಎರಡೂ ರಾಜ್ಯಗಳ ನಡುವೆ ಶಾಶ್ವತವಾದ ಸಂಧಿಯನ್ನು ಕುರಿತು ಮಾತಾಡಲು ವೀರಸಿಂಹನು ತನ್ನ ಬಳಿಗೆ ಬರಬೇಕೆಂದು ಕೇಳಿಕೊಂಡನು. ವೀರಸಿಂಹನು ಅದಕ್ಕೆ ಒಪ್ಪಿಗೆಯನ್ನು ತಿಳಿಸಿದನು.

ನಾಲ್ಕು ದಿನಗಳ ಮೇಲೆ ಕೆಲವು ಮಂದಿ ಅಂಗರಕ್ಷಕರೊಂದಿಗೆ ತನ್ನ ನಗರಕ್ಕೆ ಬಂದ ವೀರಸಿಂಹನಿಗೆ ರಾಜ ಗೌರವಾರ್ಥವಾಗಿ ಕಾಲಕೇತು ಒಂದು ಔತಣದ ಏರ್ಪಾಡು ಮಾಡಿಸಿದನು. ಈಗ ವೀರಸಿಂಹನನ್ನು ಗೆಲ್ಲುವುದು ಬಹಳ ಸುಲಭವೆಂದು ಭಾವಿಸಿದ ಕಾಲಕೇತು, ವೀರಸಿಂಹನನ್ನು ಸ್ವಲ್ಪ ಆಟವಾಡಿಸೋಣವೆಂದುಕೊಂಡು "ಒಬ್ಬ ರಾಜನು ತನ್ನ ಶತ್ರು ರಾಜನನ್ನು ನಂಬಿಸಿ ಔತಣಕ್ಕೆ ಆಹ್ವಾನಿಸಿ, ಈಗ ನಿನ್ನನ್ನು ಬಂಧಿಸುವೆನೆಂದರೆ, ಆ ರಾಜನ ಪರಿಸ್ಥಿತಿ ಹೇಗಿದ್ದೀತು ?" ಎಂದು ಕೇಳಿದನು.

"ಆ ಶತ್ರುರಾಜನು ಬುದ್ಧಿಯುಳ್ಳವನಾಗಿದ್ದರೆ ಹಗೆಗಾರನನ್ನು ನಂಬಿ ಔತಣಕ್ಕೆ ಬರಲಿಕ್ಕೇ ಇಲ್ಲ" ಎಂದನು ಸಿಂಹಪುರಿ ರಾಜ ವೀರಸಿಂಹ. ಈ ಪ್ರತ್ಯುತ್ತರದಿಂದ ಕಾಲಕೇತುವಿಗೆ ಅನುಮಾನವಾಗಿ "ಯಾರು ನೀನು ? ನಿಜ ಹೇಳು !" ಎಂದು ಗದರಿಸಿ ಕೇಳಿದನು.

"ನಾನು ವೀರಸಿಂಹ ಮಹಾರಾಜರ ಪ್ರಧಾನ ಅಂಗರಕ್ಷಕ" ಎಂದು ಅವನು ತನ್ನ ಮಾರುವೇಷವನ್ನು ತೆಗೆದು ಹಾಕಿ, "ಕಾಲಕೇತೂ ! ನಮ್ಮ ಮಹಾರಾಜರು ನಿನ್ನನ್ನು ಎಷ್ಟೋ ಸಾರಿ ಯುದ್ಧದಲ್ಲಿ ಸೋಲಿಸಿದರೂ ನಿನ್ನನ್ನು ಜೀವದೊಂದಿಗೆ ಬಿಟ್ಟಿದ್ದಾರೆಯೇ ಹೊರತು ಸಾಮಂತನಾಗಿ ಮಾಡಲು ಆಲೋಚಿಸಿಲ್ಲ. ಈಗ ನಮ್ಮ ಸೈನ್ಯ ರಾಜ್ಯದ ಮೇರೆ ದಾಟಿ ದಾಳಿ ಮಾಡಲು ಸಿದ್ಧವಾಗಿವೆ. ನೀನೇನು ಹೇಳಲಿರುವಿ"? ಎಂದು ಕೇಳಿದನು.

ಕಾಲಕೇತು ಗಡಗಡ ನಡುಗುತ್ತ, "ನಾನು ಸಿಂಹಪುರಿ ಮಹಾರಾಜರಿಗೆ ಶರಣಾಗಿ ಸಾಮಂತನಾಗಿರಲು ಒಪ್ಪುತ್ತೇನೆ. ಈ ಸಂಗತಿಯನ್ನು ಮಹಾರಾಜರೊಂದಿಗೆ ಬಿನ್ನವಿಸಿಕೊಳ್ಳಲು ಕಾಣಿಕೆಯೊಂದಿಗೆ ಈಗಲೇ ನಿಮ್ಮೊಂದಿಗೆ ಬರುತ್ತೇನೆ." ಎಂದನು.






# ನಾಟ್ಯಪ್ರಶಂಸೆ

ಬಹಳ ಕಾಲದ ಹಿಂದೆ ಲಕ್ಷಣದೇಶದಲ್ಲಿ ಚೂಡಾಮಣಿ ಎಂಬ ನರ್ತಕಿಯೊಬ್ಬಳಿದ್ದಳು. ಅವಳು ನೃತ್ಯ ಕಲೆಯ ವಿವಿಧ ಶಾಖೆಗಳಲ್ಲಿ ಚೆನ್ನಾಗಿ ನುರಿತವಳು. ಮೈ ಮಾಟವೂ ಅದಕ್ಕೆ ತಕ್ಕಂತಿದ್ದಿತು. ಅವಳು ಅನೇಕ ರಾಜ ಮಹಾರಾಜರ ಸಭೆಗಳಲ್ಲಿ ತನ್ನ ನಾಟ್ಯಕೌಶಲವನ್ನು ಪ್ರದರ್ಶನ ಮಾಡಿ, ಎಲ್ಲರಿಂದಲೂ ಅವಳಿಗೆ ಅವಳೇ ಸಾಟಿ ಎಂದು ಹೊಗಳಿಸಿಕೊಂಡಿದ್ದಳು. ಹೀಗಾಗಿ ಅವಳಲ್ಲಿ ಸ್ವಲ್ಪ ಗರ್ವವೂ ಜತೆಯಾಗಿತ್ತು.

ಒಂದು ಸಾರಿ ಅವಳು ಮಾಳವರಾಜನ ಸಭಾಂಕಣ ದಲ್ಲಿ ತನ್ನ ನಾಟ್ಯ ವಿದ್ಯೆಯನ್ನು ಪ್ರದರ್ಶನ ಮಾಡಿದಳು. ಅವಳ ವಿವಿಧ ಗತಿಯ, ವಿವಿಧ ಪದ್ಧತಿಯ ನಾಟ್ಯಗಳನ್ನು ನೋಡಿ ಸಭಿಕರೂ, ರಾಜನೂ ಅತ್ಯಂತ ಹರ್ಷಿತರಾದರು. ಇಂತಹ ಕಲಾಭಿನಯವನ್ನು ಈ ವರೆಗೂ ನೋಡಿಲ್ಲವೆಂದು ಕೆಲವರು ಅಂದುಕೊಂಡರು,

ರಾಜನು ಅವಳಿಗೆ ಬಹುಮಾನ ಕೊಡಲು ಸಿದ್ಧನಾಗುವಾಗ, ಅವಳು ರಾಜನೊಂದಿಗೆ ವಿನಯ ದಿಂದ, "ಮಹಾಪ್ರಭೂ! ನಾಟ್ಯಶಾಸ್ತ್ರದಲ್ಲಿ ಪ್ರಮಾಣ ಗ್ರಂಥವನ್ನು ಬರೆದ ಲಲಿತಾಚಾರ್ಯ ಮಹಾನುಭಾವರು ತಮ್ಮ ಅಸ್ಥಾನದಲ್ಲಿರುವರಲ್ಲವೆ? ನನ್ನ ನಾಟ್ಯವನ್ನು ಕುರಿತು ಅವರ ಬಾಯಿಯಿಂದ ನಾಲ್ಕು ಮಾತುಗಳನ್ನು ಹೇಳಿಸಿದಿರಾದರೆ, ಅದಕ್ಕಿಂತ ಹೆಚ್ಚಿನ ಬಹುಮಾನ ಬೇರೊಂದಿಲ್ಲ. ಅಷ್ಟೊಂದು ದಯ ಮಾಡಿಸಬೇಕು ಮಹಾಪ್ರಭು!" ಎಂದಳು.

ರಾಜನು ಚೂಡಾಮಣಿಯ ವಿನಯಕ್ಕೆ ಸಂತೋಷ ಪಟ್ಟು, ಲಲಿತಾಚಾರ್ಯನನ್ನು ನೋಡಿ, ಅವಳ ನಾಟ್ಯವನ್ನು ಕುರಿತು ಮಾತಾಡಬೇಕೆಂದು ಹೇಳಿದನು.

ಲಲಿತಾಚಾರ್ಯನು ತನ್ನ ಉನ್ನತಾಸನದಿಂದ ಎದ್ದು ನಿಂತು, "ಚೂಡಾಮಣಿಯ ನಾಟ್ಯವು ಎಲ್ಲರನ್ನೂ ಸಂತೋಷಪಡಿಸಿರುವ ಮಾತು ನಿಜವೇ. ಆಕೆ ತಾನು ನಾಟ್ಯಕಲೆಯಲ್ಲಿ ಸಂಪೂರ್ಣ ಪ್ರಜ್ಞೆ ಸಾಧಿಸಿದ್ದೇನೆಂದು ತಿಳಿದಿದ್ದಾಳೆ. ಆದುದರಿಂದ ಇವಳು ತಿಳಿದುಕೊಳ್ಳಬೇಕಾದ ಕೆಲವು ಸೂಕ್ಷ್ಮಗತಿಗಳನ್ನು ಹೇಳುತ್ತೇನೆ" ಎಂದು ಪ್ರಾರಂಭಿಸಿ, ನಾಟ್ಯಶಾಸ್ತ್ರಕ್ಕೆ ಸಂಬಂಧಿಸಿದ ಅವಯವಗಳ ಚಲನೆಗಳನ್ನು ಕುರಿತು ಕೆಲವು ಮಾತುಗಳನ್ನು ಹೇಳಿದನು. ಅಷ್ಟೇ. ಹೊರತು ಚೂಡಾಮಣಿಯ ನಾಟ್ಯ ಪ್ರದರ್ಶನವನ್ನು ಕುರಿತು ಪ್ರಶಂಸೆಯ ನುಡಿಗಳನ್ನೇನೂ ಹೇಳಲಿಲ್ಲ.

ಜೆ. ರತ್ನ

ಮರುದಿನ ಲಲಿತಾಚಾರ್ಯನ ಬಳಿಗೆ ಚೂಡಾಮಣಿಯ ಸೇವಕನೊಬ್ಬನು ಬಂದು ತನ್ನ ಯಜಮಾನಳು ತಮಗೆ ಕೊಡುವಂತೆ ಹೇಳಿದಳೆಂದು ಒಂದು ಪತ್ರವನ್ನೂ, ಬೆಲೆಬಾಳುವ ರೇಷ್ಮೆ ಬಟ್ಟೆಯೊಳಗೆ ಅಂದವಾಗಿ ಕಟ್ಟಲ್ಪಟ್ಟ ಯಾವುದೋ ವಸ್ತುವನ್ನೂ ಕೊಟ್ಟು ಹೊರಟು ಹೋದನು.

ಲಲಿತಾಚಾರ್ಯನು ಪತ್ರವನ್ನು ಬಿಡಿಸಿ ಓದಿದನು. ಅದರಲ್ಲಿ ಹೀಗಿದ್ದಿತು : "ಮಹಾನುಭಾವರೇ, ಅನೇಕ ರಾಜ ಮಹಾರಾಜರುಗಳಿಂದ ಬಹುಮಾನ ಪಡೆದು ನಾಟ್ಯ ವಿದ್ಯೆಯಲ್ಲಿ ಈಡು ಜೋಡಿಲ್ಲದವಳೆಂದು ಹೇಳಿಸಿಕೊಂಡವಳು ನಾನು. ನನ್ನನ್ನು ಕುರಿತು ನಾಲ್ಕಾರು ಮಾತುಗಳನ್ನು ಮಹಾರಾಜರ ಸಭೆಯಲ್ಲಿ ಹೇಳಿದಿರಿ. ಸಂತೋಷ. ನಾಟ್ಯಶಾಸ್ತ್ರವನ್ನು ಚೆನ್ನಾಗಿ ಬಲ್ಲವರಾದ ನಿಮಗೆ ಏನೂ ಕಾಣಿಕೆ ಕೊಡದೆ ಈ ದೇಶ ಬಿಟ್ಟು ಹೋಗಲು ಮನಸ್ಸಿಲ್ಲದೆ, ಯಾವಾಗಲೂ ನನ್ನ ನೆನಪು ನಿಮಗಿರುವಂತೆ ಆಶಿಸುತ್ತ, ಈ ಬಹುಮಾನವನ್ನು ಕಳುಹಿಸುತ್ತಿದ್ದೇನೆ. ದಯವಿಟ್ಟು ಸ್ವೀಕರಿಸಬೇಕು".

ಇದನ್ನು ನೋಡಿ ಲಲಿತಾಚಾರ್ಯನು ರೇಶ್ಮೆಯ ಮೂಟೆಯನ್ನು ಬಿಚ್ಚಿ ಅದರೊಳಗಿರುವುದನ್ನು ನೋಡಿ ಆಶ್ಚರ್ಯಪಟ್ಟನು. ಅದರೊಳಗೆ ಚಿಂದಿ ಚೂರು ಕಸಗಪ್ಪುಗಳ ಹೊರತು ಮತ್ತೇನೂ ಇರಲಿಲ್ಲ. ಚೂಡಾಮಣಿಯ ಅಹಂಕಾರವನ್ನು ತಿಳಿದು ಅವನು ಬೆರಗಾದರೂ, ಸಮಾಳಿಸಿಕೊಂಡು ಅವಳಿಗೆ ಈ ರೀತಿಯಾಗಿ ಒಂದು ಪತ್ರವನ್ನು ಬರೆದನು :

"ನೀನು ಕಳುಹಿಸಿದ ಬಹುಮಾನವು ಸಿಕ್ಕಿತು. ಅದರ ಮೇಲೆ ಕಟ್ಟಿದ ರೇಶ್ಮೆ ಬಟ್ಟೆ ನಿನ್ನ ನೆನಪು ಬರುವಂತಿರುವುದೆಂದು ತಿಳಿಯುವಂತಿದೆ ಎನ್ನಲು ಏನೂ ಸಂದೇಹವಿಲ್ಲ. ನಿನ್ನ ಯೋಗ್ಯತೆಗೆ ತಕ್ಕ ಹಾಗೆ ನಿನ್ನಲ್ಲಿರುವುದನ್ನು ನೀನು ಕಳುಹಿಸಿದುದು ನಿನ್ನನ್ನು ಯಾವಾಗಲೂ ನೆನಪಿರುವಂತೆ ಮಾಡುತ್ತದೆ."



ಸೇವಕನು ಈ ಪತ್ರವನ್ನು ತೆಗೆದುಕೊಂಡು ಹೋಗಿ ಚೂಡಾಮಣಿಗೆ ಕೊಟ್ಟು ಹಿಂದಿರುಗಿದನು. ಅದನ್ನು ಓದಿದ ಮೇಲೆ ತಾನು ಮಾಡಿದುದು ಎಷ್ಟು ದೊಡ್ಡ ತಪ್ಪೆಂದು ಅವಳಿಗೆ ತಿಳಿಯಿತು. ಅವಳು ಲಲಿತಾಚಾರ್ಯನ ಬಳಿಗೆ ಹೋಗಿ, ತನ್ನನ್ನು ಕ್ಷಮಿಸಬೇಕೆಂದು ಕೇಳುತ್ತಾ ಸಾಷ್ಟಾಂಗ ನಮಸ್ಕಾರ ಮಾಡಿದಳು.

ಲಲಿತಾಚಾರ್ಯನು ಪ್ರಶಾಂತ ವಚನಗಳಿಂದ ಅವಳನ್ನು ಎಬ್ಬಿಸಿ, "ಚೂಡಾಮಣೀ, ನೀನು ಒಳ್ಳೆಯ ನುರಿತ ನರ್ತಕಿ ಎನ್ನಲು ಯಾವ ಸಂದೇಹವೂ ಇಲ್ಲ. ನಾನು ನಿನ್ನನ್ನು ಅಲ್ಲಗಳೆದು ಏನೂ ಹೇಳಲಿಲ್ಲ. ಚಿಂತಿಸಬೇಡ" ಎಂದನು.

ಚೂಡಾಮಣಿ ತಗ್ಗಿದ ದನಿಯಿಂದ, "ಆ ಸಂಗತಿಯನ್ನು ನೀವು ನಿನ್ನೆ ಸಭೆಯಲ್ಲಿ ಸೂಚಿಸದೆ ಹೋದಿರಿ. ಆದುದರಿಂದ ನನ್ನಿಂದ ಈ ದೊಡ್ಡ ತಪ್ಪು ಸಂಭವಿಸಿತು. ತಾವು ನನ್ನಂಥವಳಲ್ಲಿ ಅಡಗಿರುವ ಸಹಜ

ವಾದ ಗರ್ವವನ್ನು ಬಹಿರಂಗಪಡಿಸಿ ಬುದ್ಧಿ ಕಲಿಸ ಬೇಕೆಂದು ಭಾವಿಸಿ ಹಾಗೆ ಮಾತಾಡಿರಬೇಕು" ಎಂದಳು.

ಆ ಮಾತು ಕೇಳಿ ಲಲಿತಾಚಾರ್ಯನು ನಕ್ಕು, "ನಾಟ್ಯ ಪ್ರದರ್ಶನ ಮಾಡುವುದರಲ್ಲಿ ನಿನಗೆ ನಿನ್ನನ್ನು ಮಿಂಚಿದವರು ಯಾರೂ ಇಲ್ಲವೆಂಬ ಅಹಂಕಾರವಿದೆ ಎನ್ನಲು ಯಾವ ಸಂದೇಹವೂ ಇಲ್ಲ. ನಿನ್ನ ನಾಟ್ಯ ವನ್ನು ಕುರಿತು ಸಭೆಯಲ್ಲಿ ನನ್ನ ಅಭಿಪ್ರಾಯ ತಿಳಿಯ ಬೇಕೆಂದು ನೀನು ಬಯಸಿದುದರಲ್ಲೇ ನಿನ್ನ ಉದ್ದೇಶ ಏನೆಂಬುದು ನನಗೆ ಅರ್ಥವಾಯಿತು. ಶಾಸ್ತ್ರಕಾರನಾಗಿ ಪ್ರಖ್ಯಾತನಾಗಿರುವ ನನ್ನಿಂದ ಪ್ರಶಂಸೆ ಪಡೆದು, ನೃತ್ಯ ದಲ್ಲಿ ನಿನಗಿರುವ ಖ್ಯಾತಿಯನ್ನು ಇನ್ನಷ್ಟು ಮೆರುಗು ಗೊಳಿಸಬೇಕೆಂಬುದು ನಿನ್ನ ಆಶೆ, ಹೌದಾ ?" ಎಂದನು.

ಚೂಡಾಮಣಿ ಲಲಿತಾಚಾರ್ಯನಿಗೆ ನಮಸ್ಕರಿ ಸುತ್ತಾ ಹೌದೆಂಬಂತೆ ತಲೆಯಾಡಿಸಿದಳು.

"ನೋಡು ಚೂಡಾಮಣೀ, ನಾನು ಸಾಮಾನ್ಯ ಪ್ರೇಕ್ಷಕರ ಹಾಗೆ ನಿನ್ನ ಪಾದಗಳ ಪ್ರತಿ ಕದಲಿಕೆಗೆ ತನ್ಮಯನಾಗಿ ಹೋಗಿ ಚಪ್ಪಾಳೆ ತಟ್ಟಲಾರೆನಷ್ಟೇ ? ಅದಕ್ಕೆ ಕಾರಣ, ನಾಟ್ಯಶಾಸ್ತ್ರವು ಎಂತಹುದೆಂದು ನನಗೆ ಚೆನ್ನಾಗಿ ಗೊತ್ತಿರುವುದೇ. ನಾಟ್ಯಾಚಾರ್ಯ ನಾದ ನಾನು, ನಿನ್ನ ವಿದ್ಯೆಯನ್ನು ಇನ್ನಷ್ಟು ಪರಿ ಪಕ್ವತೆಗೊಳಿಸಬೇಕೆಂಬ ಬಾಧ್ಯತೆಯಿಂದ ಮಾತಾಡ ಬೇಕಾದುದು ನನ್ನ ಧರ್ಮವಾಗಿದೆ. ಆದುದರಿಂದಲೇ ನಾಟ್ಯದಲ್ಲಿ ನಿನಗೆ ತಿಳಿಯದಿರುವ, ನಿನ್ನಿಂದ ಸಾಧ್ಯ ವಾಗುವಂತಹ ಕೆಲವು ಸೂಕ್ಷ್ಮ ಚಲನೆಗಳನ್ನು ಕುರಿತು ಪ್ರಸ್ತಾವಿಸಿದೆನು" ಎಂದನು ಲಲಿತಾಚಾರ್ಯ.

"ಮಹಾಸ್ವಾಮಿ, ಅಜ್ಞಾನದಿಂದ ನಿಮ್ಮ ಸದಭಿ ಪ್ರಾಯವನ್ನು ಗುರುತಿಸದೆ ಹೋದೆನು" ಎಂದಳು ಚೂಡಾಮಣಿ ದೈನ್ಯತೆಯಿಂದ.

"ಚೂಡಾಮಣೀ, ನಿನ್ನದು ಕೇವಲ ಅಜ್ಞಾನವಲ್ಲ. ಅವಸರ. ನಾಟ್ಯದಲ್ಲಿರುವ ಅತಿ ಸೂಕ್ಷ್ಮವಾದ ಅವ ಯವ ಚಲನೆಗಳು ಯಾವುವೆಂದು ನಿನ್ನ ಹೊರತು ಬೇರೆ ಯಾರೂ ತಿಳಿದುಕೊಳ್ಳಬೇಕಾದ ಅಗತ್ಯವಿಲ್ಲ. ಮಹಾ ಸಮುದ್ರದಂತಹ ನಾಟ್ಯಶಾಸ್ತ್ರದಲ್ಲಿ ನಿನಗೆ ತಿಳಿಯದ ಸಣ್ಣ ವಿಷಯಗಳನ್ನು ಕುರಿತು ನಾನು ಹೇಳುವುದನ್ನು ನೀನು ಗಮನಿಸಿದ್ದರೆ, ನಾಟ್ಯದಲ್ಲಿ ನಿನಗಿರುವ ಪ್ರಜ್ಞೆಯನ್ನು ನಾನು ಮೆಚ್ಚಿಕೊಂಡೆನೆಂದು ನಿನಗೆ ಗೊತ್ತಾಗುತ್ತಿತ್ತು. ಹೇಗೆ ಪರಿಶೀಲಿಸಿ ನೋಡಿದರೂ, ಸಭೆಯಲ್ಲಿ ನಾನಾಡಿದ ಮಾತುಗಳು ನಿನ್ನ ಪ್ರಶಂಸೆಯನ್ನೇ ಸೂಚಿಸುತ್ತವಲ್ಲದೆ ನಿರಸನ ವೇನಲ್ಲ" ಎಂದನು ಲಲಿತಾಚಾರ್ಯ.

ಆಮೇಲೆ ಚೂಡಾಮಣಿ ಕೆಲವು ದಿನಗಳವರೆಗೆ ಲಲಿತಾಚಾರ್ಯನ ಬಳಿಯಲ್ಲಿದ್ದು, ತನಗೆ ತಿಳಿಯ ದಂತಹ ಅಂಶಗಳನ್ನು ಅಧ್ಯಯನ ಮಾಡಿ, ಆತನ ಆಶೀರ್ವಾದ ಪಡೆದು ತನ್ನ ದೇಶಕ್ಕೆ ಹಿಂದಿರುಗಿದಳು





# ತಾಯಿಯ ಆಶೆ

ಒಂದು ಊರಿನಲ್ಲಿ ಕಾವೇರಮ್ಮ ಎಂಬವಳು ಗೃಹಿಣಿಯಾಗಿ, ಮನೆಯ ಯಜಮಾನಿಯಾಗಿ ಮನೆತನ ನಡೆಸಿಕೊಂಡಿದ್ದಳು. ಅವಳ ಮಗ ವೀರಭದ್ರನು ಮದುವೆಯ ಮಾತು ಬರುವವರೆಗೂ ತಾಯಿಯ ಮಾತು ಮೀರಿದವನಲ್ಲ. ಆದರೆ ವೀರಭದ್ರನು ಮೆಚ್ಚಿಕೊಂಡ ಹುಡುಗಿಯ ಕಡೆಯಿಂದ ಯಾವ ವರದಕ್ಷಿಣೆಯೂ ಬರುವುದಿಲ್ಲವೆಂದು ತಿಳಿದು, ಬೇರೆ ಉಪಾಯಗಾಣದೆ ಕಾವೇರಮ್ಮ, ತನಗೆ ಮೈಸರಿಯಿಲ್ಲವೆಂಬ ನೆವನ ಹೂಡಿ ಮಂಚದಲ್ಲಿ ಸುಮ್ಮನೆ ಮಲಗಿಬಿಟ್ಟಳು. ವೀರಭದ್ರನಿಗೆ ಏನು ಮಾಡಲೂ ತೋರಲಿಲ್ಲ. ತಾಯಿಗೆ ಯಾವ ಅಸ್ವಸ್ಥತೆಯೂ ಇಲ್ಲವೆಂದು ಅವನಿಗೆ ಗೊತ್ತು. ಸೊಸೆಯ ಜತೆಯಲ್ಲಿ ಯಾವ ಬಳುವಳಿಯೂ ಬರುವುದಿಲ್ಲವೆಂಬ ಕೋಪವೇ ತಾಯಿಯ ಈ ಅಸ್ವಸ್ಥತೆಯ ಸೋಗಿಗೆ ಕಾರಣ.

ವೀರಭದ್ರನು ತಾಯಿಗೆ ಎಷ್ಟೋ ಬಗೆಯಲ್ಲಿ ಹೇಳಿ ನೋಡಿದನು. ಎಲ್ಲದಕ್ಕೂ ಅವಳು, "ನೀನು ದೊಡ್ಡವನಾದಾಯಿತು. ನನಗೇನೂ ಮೈ ಚೆನ್ನಾಗಿಲ್ಲ. ನೀನು ಮಾಡಿಕೊಂಡ ಹುಡುಗಿ ಹೇಗೂ ಮನೆಗೆ ಬರುತ್ತಾಳೆ. ಆಗ ಸೊಸೆಯನ್ನು ನೋಡದೆ ಹೋಗುತ್ತೇನೆಯೆ? ಮದುವೆಗೆ ನನ್ನಿಂದ ಬರಲು ಸಾಧ್ಯವಿಲ್ಲಪ್ಪಾ" ಎಂದು ಮೊಂಡುತನವಾಗಿಯೇ ಹೇಳಿದಳು.

ಆಕೆಗೆ ವೀರಭದ್ರ ಒಬ್ಬನೇ ಮಗ. ಅವನು ಮೂರು ವರ್ಷಗಳಿಂದ ಬೇರೊಂದು ಊರಿನಲ್ಲಿ ಉದ್ಯೋಗ ಸಂಪಾದಿಸಿಕೊಂಡಿದ್ದನು. ಅವನು ಬಾಡಿಗೆಗಿರುವ ಮನೆಯ ಪಕ್ಕದಲ್ಲಿಯೇ ಒಂದು ಬಡ ಕುಟುಂಬವಿದ್ದಿತು. ಚಿಕ್ಕಂದಿನಲ್ಲಿ ತಾಯಿಯನ್ನು ಕಳೆದುಕೊಂಡಿದ್ದ ಲಲಿತೆ ತನ್ನ ತಮ್ಮಂದಿರ ಲಾಲನೆ ಪಾಲನೆಗಳನ್ನು ನೋಡಿಕೊಳ್ಳುತ್ತ ಆ ಮನೆಯಲ್ಲಿದ್ದಳು. ಅವಳ ತಂದೆಯ ಸಂಪಾದನೆ ತೀರಾ ಕಡಿಮೆ. ಸಾಕೂ ಸಾಲದಂತಹ ಆದಾಯದಿಂದಲೇ ಲಲಿತೆ ಗುಟ್ಟು ಪಟ್ಟಾಗಿ ಹೇಗೋ ಮನೆ ನಡೆಸಿಕೊಂಡಿದ್ದಳು. ಅವಳು ಮಹಾ ಸುಂದರಿಯೇನಲ್ಲದಿದ್ದರೂ ಅವಳ ಶಾಂತಗುಣವೂ, ಸಹನೆಯೂ. ಮನೆತನ ನಡೆಸುವ ಜಾಣ್ಮೆಯೂ ವೀರಭದ್ರನನ್ನು ಆಕರ್ಷಿಸಿದುವು.

ಲಲಿತೆಯಂತಹ ಹೆಂಡತಿ ಸಿಗಬೇಕಾದರೆ ಅದೃಷ್ಟಬೇಕೆನಿಸಿತು ಅವನಿಗೆ. ಅವಳ ಹತ್ತಿರ ಮಾತಾಡಿ ಅಭಿಪ್ರಾಯ ತಿಳಿದುಕೊಂಡ ಮೇಲೆ, ಅವನು ತಾಯಿ

ಎಂ. ಕೆ. ಈಶ್ವರರಾವ್



ತಂದೆಯರನ್ನು ಅವಳ ಮನೆಗೆ ಕರೆದುಕೊಂಡು ಬಂದನು. ತಂದೆಯೇನೋ ಹುಡುಗಿಯನ್ನು ನೋಡಿ ಒಪ್ಪಿದ್ದೂ ಆಯಿತು.

ಆದರೆ ಕಾವೇರಮ್ಮ ಮಾತ್ರ ತನ್ನ ಒಪ್ಪಿಗೆ ತಿಳಿಸಲಿಲ್ಲ. "ಆಮೇಲೆ ಹೇಳುತ್ತೇವೆ" ಎಂದಷ್ಟೇ ಹೇಳಿ ಹಿಂದಿರುಗುತ್ತ, ಗಾಡಿಯಲ್ಲಿ ಹೋಗುವಾಗ, "ಇಪ್ಪತ್ತೈದು ಸಾವಿರ ವರದಕ್ಷಿಣೆ ಕೊಡುವ ಹಾಗಿದ್ದರೆ ಮಾತ್ರ ಈ ಹುಡುಗಿಯನ್ನು ಮನೆಗೆ ತಂದುಕೊಳ್ಳಬಹುದು" ಎಂದಳು.

ಅದನ್ನು ಕೇಳಿ ವೀರಭದ್ರನು ಆಶ್ಚರ್ಯಪಡುತ್ತ "ಅವರ ಮನೆ ನೋಡಿದರೇ ನಿನಗೆ ತಿಳಿಯುವುದಿಲ್ಲ ವೇನಮ್ಮಾ? ನಮಗೆ ಬೇಕಾದ್ದು ಹುಡುಗಿ. ಲಲಿತೆಯ ತಂದೆ ಇಪ್ಪತ್ತೈದು ರೂಪಾಯಿ ಕೂಡಾ ಕೊಡುವ ಸ್ಥಿತಿಯಲ್ಲಿ ಇಲ್ಲ" ಎಂದನು.

ಕಾವೇರಮ್ಮ ಮುಖವನ್ನು ಕೇನೆಗಡ್ಡೆಯ ಹಾಗೆ ಮಾಡಿಕೊಂಡು, "ಹಾಗಾದರೆ ಇಷ್ಟೊಂದು ದರಿದ್ರ ಹಿಡಿದ ಹುಡುಗಿ ನಮಗೆ ಬೇಡವೇ ಬೇಡ. ಮಹಾ ಅವಮಾನ!" ಎಂದಳು ನಿರ್ದಾಕ್ಷಿಣ್ಯದಿಂದ.

ವೀರಭದ್ರನು ಸಣ್ಣ ಮುಖಮಾಡಿಕೊಂಡು, "ಹಣವೇ ಮುಖ್ಯವಲ್ಲಮ್ಮ. ನಾನಂತೂ ಮದುವೆ ಯಾಗುವುದಾದರೆ ಆ ಲಲಿತೆಯನ್ನೇ ಹೊರತು ಬೇರೆ ಯಾವಳನ್ನೂ ಮಾಡಿಕೊಳ್ಳಲಾರೆ" ಎಂದನು ಖಂಡಿತ ಸ್ವರದಲ್ಲಿ.

ವೀರಭದ್ರನ ತಂದೆ ಯಾರ ಕಡೆಗೂ ಮಾತಾಡದೆ ತಟಸ್ಥನಾಗಿದ್ದು ಬಿಟ್ಟನು.

"ಹೋಗಲಿ, ಅವರು ವರದಕ್ಷಿಣೆ ಕೊಡದಿದ್ದರೆ, ವರನ ಮರ್ಯಾದೆ ಅಂತ ಐದು ಸಾವಿರವಾದರೂ ಕೊಡಲಿ. ಇಲ್ಲದಿದ್ದರೆ ಈ ಸುದ್ದಿ ಎತ್ತಬೇಡ! ನಮ್ಮ ಘನತೆ ಉಳಿಯಬೇಕೋ ಬೇಡವೋ?" ಎಂದಳು ತಾಯಿ ಕಾವೇರಮ್ಮ.

"ಆ ಸುದ್ದಿಗಳನ್ನೆಲ್ಲಾ ಕಟ್ಟಿಡು ಅಮ್ಮಾ. ಮದುವೆಯ ಖರ್ಚಿಗಾಗಿ ನಾನೇ ಲಲಿತೆಯ ತಂದೆಗೆ ಸ್ವಲ್ಪ ಹಣ ಕೊಡುತ್ತೇನೆ. ಗೊತ್ತಾ?" ಎಂದನು ವೀರಭದ್ರ.

ಆಮೇಲೆ ಕಾವೇರಮ್ಮನನ್ನು ಕೇಳದೆ ಮಾಡದೆಯೇ ಮದುವೆಯ ಎಲ್ಲಾ ಏರ್ಪಾಡುಗಳೂ ನಡೆದುವು. ಮರುದಿನವೇ ಮದುವೆ ಎಂಬಲ್ಲಿಯವರೆಗೂ ಎಲ್ಲಾ ಸಿದ್ಧತೆಯೂ ಆಯಿತು.

ಬಂಧುಗಳು ಬಂದು ಕೂಡಿದ್ದಾಯಿತು. ನಾಲ್ಕು ಗಾಡಿಗಳು ವಧುವಿನ ಊರಿಗೆ ಹೊರಟು ಹೋದುವು. ಕಾವೇರಮ್ಮ ತನಗೆ ಸೌಖ್ಯವಿಲ್ಲವೆನ್ನುತ್ತ ತಂದೆ ಮಗಂದಿರನ್ನು ಹೋಗಲು ಹೇಳಿಬಿಟ್ಟಳು.

"ಆ ಊರಿನಲ್ಲಿ ಬೇಕಾದಷ್ಟು ವೈದ್ಯರಿದ್ದಾರಮ್ಮ, ನಿನ್ನ ಪೆಟ್ಟಿಗೆ ಸಾಮಾನುಗಳನ್ನೆಲ್ಲಾ ಬಾವಯ್ಯನೊಂದಿಗೆ ಗಾಡಿಯಲ್ಲಿ ಆಗಲೇ ಕಳುಹಿಸಿಯಾಯಿತು. ನೀನೂ ಹೊರಡಲೇ ಬೇಕು" ಎಂದು ತಾಯಿಯನ್ನು ಒತ್ತಾಯಿಸಿದನು ವೀರಭದ್ರ.



ಅಂತೂ ಕಾವೇರಮ್ಮ ಹೊರಟಳು. ಅವರ ಗಾಡಿ ಆ ಊರನ್ನು ಮುಟ್ಟಬೇಕಾದರೆ ನದಿಯನ್ನು ದಾಟಿ ಆಚೆಗೆ ಹೋಗಬೇಕು. ಅವರ ಗಾಡಿ ನದಿಯ ಹತ್ತಿರ ಬಂದಾಗ, ನದಿಯಲ್ಲಿ ಹೊಸ ನೀರು ಸೇರಿ ಉಕ್ಕಿ ಹರಿಯುತಿತ್ತು, ಸೇತುವೆ ನದಿಯ ನೀರಿನಲ್ಲಿ ಮುಳುಗಿದುದನ್ನು ನೋಡಿ, "ನೀರಿಳಿಯುವವರೆಗೂ ಗಾಡಿ ಹೊಡೆಯಲು ಸಾಧ್ಯವಿಲ್ಲ. ಅಷ್ಟರವರೆಗೆ ಕಾಯಲೇ ಬೇಕು" ಎಂದನು ಗಾಡಿಯವನು.

ಮರುದಿನ ಬೆಳಿಗ್ಗೆ ಮದುವೆಯ ಮುಹೂರ್ತವಾದುದರಿಂದ ವೀರಭದ್ರನು ದಿಗಿಲು ಬೀಳುತ್ತ "ನೀರು ಯಾವಾಗ ಕಡಿಮೆಯಾಗುತ್ತದೆ?" ಎಂದು ಗಾಡಿಯವನನ್ನು ಕೇಳಿದನು.

"ಖಂಡಿತ ಹೇಳಲಾಗದು, ಮಧ್ಯ ರಾತ್ರಿಗೆ ಕಡಿಮೆಯಾಗಬಹುದು. ನಾಲ್ಕೈದು ದಿನ ಹಿಡಿದರೂ ಹಿಡಿಯಬಹುದು. ಅದು ನಮ್ಮ ಕೈಯಲ್ಲಿರುವ ಮಾತಲ್ಲ!" ಎಂದನು ಗಾಡಿಯವನು.

ಆ ಮಾತು ಕೇಳಿ ಕಾವೇರಮ್ಮ ಗಾಡಿಯಲ್ಲಿ ಉತ್ಸಾಹದಿಂದ ಎದ್ದು ಕುಳಿತಳು. ಅಷ್ಟರಲ್ಲಿ ಇದ್ದಕ್ಕಿದ್ದ ಹಾಗೆ ಸುಳಿಗಾಳಿ ಬೀಸ ತೊಡಗಿತು. ಮಳೆಯೂ ಬರುವ ಹಾಗೆ ತೋರಿತು. ನದಿಯ ತೀರಕ್ಕೆ ಸಮೀಪವಾಗಿ ತುಸು ದೂರದಲ್ಲಿ ಒಂದು ಹಂಚಿನ ಮನೆ ಇದ್ದಿತು. ಗಾಡಿಯವನು ಆ ಮನೆಯ ಕಡೆಗೆ ಗಾಡಿಯನ್ನು ಸಾಗಿಸಿಕೊಂಡು ಹೋದನು.

ವೀರಭದ್ರನು ಬಾಗಿಲು ತಟ್ಟಿದ ಕೂಡಲೇ, ಬಾಗಿಲು ತೆರೆಯಲ್ಪಟ್ಟಿತು. ಒಳಗೆ ಒಬ್ಬ ಮಧ್ಯಮ ವಯಸ್ಸಿನವನು ನಿಂತಿದ್ದನು. "ಯಾರು ನೀವು? ಏನು ಬೇಕು ನಿಮಗೆ?" ಎಂದು ಆ ಮನೆಯವನು ಪ್ರಶ್ನಿಸಿದನು.

ವೀರಭದ್ರನು ಆವನೊಂದಿಗೆ ತಮ್ಮ ಸಮಾಚಾರವನ್ನು ಹೇಳಿ, "ಕತ್ತಲೆಯಾಗಿ ಹೋಯಿತು. ಗಾಳಿ ಮಳೆ ಶುರುವಾಗಿದೆ. ನದಿಯ ನೀರು ತಗ್ಗುವವರೆಗೆ ಸ್ವಲ್ಪ ಈ ಮನೆಯಲ್ಲಿರಲು ದಯಮಾಡಿ ಅನುಮತಿ ಕೊಡುವಿರಾ?" ಎಂದನು.

"ಸಂತೋಷವಾಗಿ. ಮನೆ ದೊಡ್ಡದಾಗಿದೆ. ಈ ಮನೆಯಲ್ಲಿ ನನ್ನ ಮಗಳಿಗೆ ಮದುವೆಮಾಡಲು ನೋಡುತ್ತಿದ್ದೇನೆ. ಇನ್ನೂ ವರನು ಗೊತ್ತಾಗಿಲ್ಲ. ನೀವಿರಲು ಅಭ್ಯಂತರವೇನಿಲ್ಲ. ಬನ್ನಿ" ಎಂದು ನಗುತ್ತ ಮನೆಯವನು ಒಳಗೆ ಹೋಗುತ್ತ ಗಟ್ಟಿಯಾಗಿ, "ಅಮ್ಮಾ ರಾಗಿಣೀ! ನಮ್ಮ ಮನೆಗೆ ಅತಿಥಿಗಳು ಬಂದರು, ನೋಡು!" ಎಂದನು.

ಒಳಗಿನ ಕೋಣೆಯಿಂದ ರಾಗಿಣಿ ಎಂಬ ಹುಡುಗಿ ಅಲ್ಲಿಗೆ ಬಂದು, ವೀರಭದ್ರನ ತಾಯಿತಂದೆಯರಿಗೆ ಸಮಸ್ಕಾರ ಮಾಡಿದಳು. ಅವಳಿಗೆ ಇಪ್ಪತ್ತು ವರ್ಷ ವಯಸ್ಸಾಗಿತ್ತು. ಕಣ್ಣು ಕುಕ್ಕುವಂತಹ ಸುಂದರಿ.

ಕಾವೇರಮ್ಮ ಬೇಡ ಬೇಡವೆಂದರೂ ಕೇಳದೆ ಅವಳು ಆಗಿಂದಾಗಲೇ ಅಡಿಗೆಮಾಡಿ, ಎಲ್ಲರಿಗೂ ಬಡಿಸಿದಳು. ಒಂದು ದೊಡ್ಡ ಕೋಣೆಯನ್ನು ಗುಡಿಸಿ



ಹಾಸಿಗೆಗಳನ್ನು ಹಾಸಿ "ಏನೂ ದಾಕ್ಷಿಣ್ಯ ಮಾಡಬೇಡಿ. ಯಾವ ಅಗತ್ಯ ಬಂದರೂ ಕರೆಯಿರಿ. ಪಕ್ಕದ ಕೋಣೆಯಲ್ಲೇ ಇರುತ್ತೇನೆ." ಎಂದು ಹೇಳಿ ರಾಗಿಣಿ ಹೊರಟುಹೋದಳು.

ಕಾವೇರಮ್ಮನಿಗೆ ರಾಗಿಣಿಯನ್ನು ನೋಡಿದ ಕೂಡಲೇ ಒಂದು ಹೊಸ ಆಲೋಚನೆ ಬಂದಿತು. ಸುಂದರವಾದ ಕನ್ಯೆ. ಮನೆಯವನಿಗೆ ಒಬ್ಬಳೇ ಮಗಳೆಂದು ಕಾಣುತ್ತದೆ. ಸ್ತ್ರೀ ಧನವೇನೇ ಇದ್ದರೂ, ಸುಂದರಿಯಾದ ಸೊಸೆಯೊಂದಿಗೆ, ನದಿಯ ಬದಿಯಲ್ಲಿರುವ ಅಂದವಾದ ಮನೆ ತಮ್ಮದಾಗುತ್ತದೆ.

"ನಮ್ಮ ಒಳಿತಿಗೇ ನದಿ ಉಕ್ಕಿದ್ದೆಂದು ಕಾಣುತ್ತದೆ!" ಎಂದುಕೊಂಡಳು ಕಾವೇರಮ್ಮ ಉತ್ಸಾಹದಿಂದ. ಅವಳ ಬಾಯಿಯಿಂದ ತನ್ನಷ್ಟಕ್ಕೆ ಹೊರಟ ಆ ಮಾತನ್ನು ಕೇಳಿ ವೀರಭದ್ರನು. "ಆದೆಂಥ ಮಾತು ಅಮ್ಮಾ? ನದಿಯ ನೀರು ಬೇಗ ತಗ್ಗಬೇಕೆಂದು ನಾನಿರುವಾಗ, ಉಕ್ಕಿದ್ದು ಒಳ್ಳೆಯದಾಯಿತು ಅಂದರೆ ಏನು ಅರ್ಥ? ಬೆಳಿಗ್ಗೆ ಮುಹೂರ್ತವೇಳೆಗೆ ಅಲ್ಲಿಗೆ ಸೇರಲೇಬೇಕು" ಎಂದನು ವೀರಭದ್ರ.

"ಆ ಮುಹೂರ್ತದಲ್ಲೇ ಇಲ್ಲಿರುವ ರಾಗಿಣಿಯ ಕೊರಳಿಗೆ ತಾಳಿ ಕಟ್ಟಿದರೆ ತೀರಿಹೋಯಿತು" ಎಂದಳು ಕಾವೇರಮ್ಮ.

ವೀರಭದ್ರನು ಮೆಟ್ಟಿಬಿದ್ದು "ನಿನಗೇನಾದರೂ ಬುದ್ಧಿ ಭ್ರಮಣೆ ಆಯಿತೇ ಅಮ್ಮಾ?" ಎಂದನು ಕೋಪದಿಂದ.

ಅದನ್ನು ಕೇಳಿ ಕಾವೇರಮ್ಮನೂ ಕೋಪದಿಂದ "ಇಲ್ಲಿರುವ ಈ ಹುಡುಗಿಗೆ ಚೆಂದವುಂಟು, ಲಕ್ಷಣವುಂಟು. ಬಂದವರಿಗೆ ಉಪಚಾರ ಮಾಡಲಿಕ್ಕೆ ಕಲಿತಿದ್ದಾಳೆ. ಏನೋ ಸ್ವಲ್ಪ ವರದಕ್ಷಿಣೆ ಕೊಡುವ ತಾಖತ್ತು ಉಳ್ಳವರಾಗಿಯೂ ಕಾಣುತ್ತಾರೆ. ಇದಕ್ಕಿಂತ ಹೆಚ್ಚು ನಿನಗೇನು ಬೇಕು?" ಎಂದಳು.

"ಮದುವೆ ಎಂದರೆ ಹಣ ವಸೂಲು ಮಾಡುವುದೇ ನಿನ್ನ ಅರ್ಥವೋ? ಅಪ್ಪನಿಗೆ ತಾತಯ್ಯ ಎಷ್ಟು ಕೊಟ್ಟದ್ದಾರೆ ಅಂತ ನಾನು ಕೇಳಿದ್ದೇನೆ" ಎಂದನು ವೀರಭದ್ರ.

ಅದನ್ನು ಕೇಳಿ ವೀರಭದ್ರನ ತಂದೆ ಮುಖ ತಿರುಗಿಸಿಕೊಂಡು ಸಣ್ಣಗೆ ನಕ್ಕನು. ಕಾವೇರಮ್ಮನಿಗೆ ಯಾರೋ ಚಿವುಟಿದ ಹಾಗಾಯಿತು ಮಗನ ಮಾತು. "ಆದರೂ ಆ ಕಾಲವೇ ಬೇರೆ, ಬೆಳಗಾದ ಕೂಡಲೇ ನಾನು ರಾಗಿಣಿಯ ತಂದೆಯೊಂದಿಗೆ ಮಾತಾಡಿ ಈ ಮದುವೆಗೆ ಒಪ್ಪಿಸಿಬಿಡುತ್ತೇನೆ. ಬೇಡಾ ಎಂದರೆ ಉಕ್ಕುವ ನದಿಯೊಳಗೆ ಹಾರಿಬಿಡುತ್ತೇನೆ" ಎಮದಳು ರೋಷದಿಂದ.

ಈ ಹೊಸ ಸಮಸ್ಯೆಗೆ ಪರಿಷ್ಕಾರವೇನೆಂದು ವೀರಭದ್ರನಿಗೆ ಅರ್ಥವಾಗಲಿಲ್ಲ. ಅವನು ಆಲೋಚಿಸುತ್ತಾ ನಿದ್ದೆಗೆ ಬಿದ್ದನು. ಮತ್ತೆ ಎಚ್ಚರಿಕೆಯಾದಾಗ ಬೆಳಗಾಗಿತ್ತು. ಕಿಟಕಿಯಿಂದ ನೋಡಿದಾಗ ನದಿಯ ನೀರು ತಗ್ಗಿ ಸೇತುವೆ ಸ್ಪಷ್ಟವಾಗಿ ಕಾಣುತ್ತಿತ್ತು.

ಆಗಲೇ ನಿದ್ದೆಯಿಂದೆದ್ದ ಕಾವೇರಮ್ಮ "ಏನೋ ವೀರಭದ್ರಾ, ನದಿ ದಾಟಿ ಹೋಗಬೇಕೆಂದು ಆಲೋಚಿಸುವೆಯಾ ಇನ್ನೂ? ನಿನ್ನೆ ಹೋದವರನ್ನೆಲ್ಲಾ ಹಿಂದೆ ಕರೆಸಿಕೊಳ್ಳಬೇಕಾದ್ದೇ. ನಿನ್ನ ಮದುವೆ ರಾಗಿಣಿಯೊಂದಿಗೇ ನಡೆಯಬೇಕು" ಎಂದು ರಾಗಿಣಿಯನ್ನು ಕರೆಯುತ್ತಾ ಒಳಕೋಣೆಗೆ ಹೋದಳು.

ಮತ್ತೆ ಒಂದೆರಡು ನಿಮಿಷವಾಗುವಷ್ಟರಲ್ಲಿ ಕಾವೇರಮ್ಮನ ಕೆಟ್ಟ ಕೂಗು ಕೇಳಿ ವೀರಭದ್ರನೂ ಅವನ ತಂದೆಯೂ ಒಳಗೆ ಓಡಿದರು. ಮನೆಯಲ್ಲಿ ಅವರ ಹೊರತು ಬೇರೆ ಯಾರೂ ಇರಲಿಲ್ಲ. ಹೊರಬಾಗಿಲು ಥಾಳಾಗಿ ತೆರೆದಿತ್ತು. ತಾವು ಗಾಡಿಯಲ್ಲಿ ತಂದ ಪೆಟ್ಟಿಗೆ ಮೊದಲಾದುವು ಅಲ್ಲಿರದೆ ಕೋಣೆ ಖಾಲಿಯಾಗಿತ್ತು. ನಡುಗುತ್ತಿದ್ದ ಕಾವೇರಿಯ ಕೈಯಲ್ಲಿ ಒಂದು ಕಾಗದದ ತುಂಡು ಇದ್ದಿತು. ವೀರಭದ್ರನು ಅದನ್ನು ತೆಗೆದು ಓದಿದನು. ಅದರಲ್ಲಿ ಹೀಗಿತ್ತು:

"ಈ ಮನೆ ನಮ್ಮದಲ್ಲ. ಮನೆಯವರೆಲ್ಲ ಯಾತ್ರೆಗೆ ಹೋಗಿರುವರೆಂದು ಗೊತ್ತಾಗಿ, ನಾವು ಬೇರೆ ಬೀಗದ ಕೈ ಉಪಯೋಗಿಸಿ ಈ ಮನೆಗೆ ಹೊಕ್ಕಿದ್ದೇವೆ. ಎಲ್ಲಿಯೂ ಬೆಲೆಬಾಳುವ ಯಾವ ವಸ್ತುವೂ ಇಲ್ಲ. ಮದುವೆಯ ಸನ್ನಾಹದಲ್ಲಿ ಬಂದ ನಿಮ್ಮ ಪೆಟ್ಟಿಗೆಯಲ್ಲಿ ಬೆಲೆ ಬಾಳುವ ವಸ್ತುಗಳು ಇರುತ್ತವೆಂದು ನಮಗೆ ಗೊತ್ತು. ನಿಮ್ಮ ಪೆಟ್ಟಿಗೆ ಒಡೆದು ನಿಮಗೆ ನಿದ್ರಾಭಂಗ ಮಾಡಬಾರದೆಂದು ಪೆಟ್ಟಿಗೆ ಎತ್ತಿಕೊಂಡು ಹೋಗಿದ್ದೇವೆ. ನಮ್ಮ ಲಾಭಕ್ಕಾಗಿಯೇ ನದಿಯಲ್ಲಿ ನೆರೆ ಬಂತು."

ಕಣ್ಣೀರು ಸುರಿಸಿಕೊಂಡಿರುವ ತಾಯಿಯನ್ನು ನೋಡಿ ವೀರಭದ್ರನು "ಅಮ್ಮಾ, ಹಾಗೇನೂ ದೊಡ್ಡ ನಷ್ಟವಾಗಿಲ್ಲ. ಹೆದರಬೇಡ. ನಿನ್ನ ನಗ ನಟ್ಟು, ಪಟ್ಟೆ ಸೀರೆಗಳೆಲ್ಲ ಬಾವಯ್ಯನ ಗಾಡಿಯಲ್ಲಿ ಕಳುಹಿಸಿದ್ದೇನೆ. ನೀನು ಆಶೆಪಟ್ಟ ಸುಂದರಿಯಾದ ಸೊಸೆ ನಮ್ಮ ಮನೆಗೆ ಬಂದ ಮರುದಿನದಲ್ಲೇ ಮನೆ ಪೂರಾ ಗುಂಡಾಂತರ ಮಾಡಿ ಓಡುತ್ತಿದ್ದಳು. ಅದು ತಪ್ಪಿತೆಂದು ಸಂತೋಷಪಡು" ಎಂದನು.

ತನ್ನ ನಗಗಳೂ ಬೆಲೆಬಾಳುವ ಸೀರೆಗಳೂ ಭದ್ರವಾಗಿರುವುದನ್ನು ತಿಳಿದು ಕಾವೇರಮ್ಮನಿಗೆ ಸಮಾಧಾನವಾಯಿತು. "ದೊಡ್ಡ ಗಂಡವೇ ತಪ್ಪಿತು. ವರದಕ್ಷಿಣೆ ಉಡುಗೊರೆ ಬೇಡವೇ ಬೇಡಪ್ಪ. ನಡೆಯಿರಿ ಮುಹೂರ್ತದ ವೇಳೆ ಸಮೀಪಿಸಿತಷ್ಟೇ? ಬರಲಿರುವ ನಿನ್ನ ಇಷ್ಟದ ನನ್ನ ಪ್ರೀತಿಯ ಸೊಸೆಗೆ ನನ್ನ ನಗಗಳನ್ನೆಲ್ಲ ಹಾಕಿ ಅಲಂಕರಿಸಬೇಕು" ಎಂದು ಅವಸರಪಡಿಸಿದಳು ಕಾವೇರಮ್ಮ.

ಕಾವೇರಮ್ಮನಲ್ಲಾದ ಬದಲಾವಣೆಯನ್ನು ನೋಡಿ ತಂದೆಗೂ, ಮಗನಿಗೂ ತೃಪ್ತಿಯಾಗಿ ಬಹಳ ಸಂತೋಷವಾಯಿತು.






# ರಾಜನ ವರ್ಚಸ್ಸು

ಹಿಂದೆ ಪುಷ್ಪಗಿರಿ ನಗರದಲ್ಲಿ ಧನಂಜಯನೂ, ಗೋಪಣ್ಣನೂ ಒಂದೇ ಬಗೆಯ ವ್ಯಾಪಾರ ವೃತ್ತಿಯನ್ನು ಸಾಗಿಸಿಕೊಂಡಿದ್ದರು. ಇಬ್ಬರದೂ ಸುಗಂಧ ದ್ರವ್ಯಗಳ ವ್ಯಾಪಾರವಾಗಿತ್ತು. ಅವರ ಅಂಗಡಿಗಳು ಹೋಗಿ ಬರುವ ಜನರು ಹೆಚ್ಚಾಗಿರುವ ರಾಜ ಬೀದಿಯಲ್ಲೇ ಇದ್ದಿತು. ಆದುದರಿಂದ ಇಬ್ಬರಿಗೂ ವ್ಯಾಪಾರವು ಬಿಡುವಿಲ್ಲದೆ ನಡೆಯುತ್ತಿತ್ತು.

ಒಂದು ದಿನ ರಾಜಭಟನೊಬ್ಬನು ಧನಂಜಯನ ಬಳಿಗೆ ಬಂದು "ನನ್ನನ್ನು ಮಹಾರಾಜರು ಕಳುಹಿಸಿದ್ದಾರೆ. ನಿಮ್ಮನ್ನು ಸಾಯಂಕಾಲದ ಹೊತ್ತಿನಲ್ಲಿ ಮಹಾರಾಜರು ತಮ್ಮ ಪ್ರತ್ಯೇಕ ಮಂದಿರಕ್ಕೆ ಬಂದು ನೋಡಲು ಅಪ್ಪಣೆ ಮಾಡಿದ್ದಾರೆ" ಎಂದು ಹೇಳಿ ಹೊರಟು ಹೋದನು.

ಸಾಯಂಕಾಲವಾದ ಕೂಡಲೇ ಧನಂಜಯನು ಹೋಗಿ ಪ್ರತ್ಯೇಕ ಮಂದಿರದಲ್ಲಿರುವ ಮಹಾರಾಜನನ್ನು ನೋಡಿದನು. ರಾಜನು ಏನು ಹೇಳಿದನೋ, ಅವನು ಏನು ಮಾಡಿದನೋ ಗೊತ್ತಾಗಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಅಲ್ಲಿಂದ ತನ್ನ ಅಂಗಡಿಗೆ ಹಿಂದಿರುಗಿ ಬಂದನು.

ಹೀಗೆ ರಾಜಭಟನೊಬ್ಬನು ಅವನ ಬಳಿಗೆ ಬರುವುದನ್ನೂ, ಧನಂಜಯನು ರಾಜಭವನದೊಳಗೆ ಹೋಗಿ ಹಿಂದಿರುಗಿ ಬರುವುದನ್ನೂ ಗೋಪಣ್ಣನು ನೋಡಿದನು. ಅವನು ಆಶ್ಚರ್ಯದಿಂದ ಧನಂಜಯನ ಬಳಿಗೆ ಬಂದು "ನಿನ್ನನ್ನು ಮಹಾರಾಜರು ಅರಮನೆಗೆ ಕರೆಸಿಕೊಂಡ ಸಂಗತಿ ಗೊತ್ತಾಯಿತು. ಏನಾದರೂ ವಿಶೇಷವಿದೆಯೇ ? ಕರೆಯಿಸಲು ಕಾರಣವೇನೆಂದು ತಿಳಿಯಬಹುದೇ ?" ಎಂದು ಕೇಳಿದನು.

"ನನಗೂ ಮಹಾರಾಜರಿಗೂ ನಡುವೆ ಎಷ್ಟೋ ರಹಸ್ಯಗಳಿವೆ. ರಾಜರಹಸ್ಯವಾಗಿರುವ ಅದನ್ನೆಲ್ಲಾ ಇನ್ನೊಬ್ಬರೊಡನೆ ಹೇಳುವುದು ಸರಿಯಲ್ಲ" ಎಂದು ಹೇಳಿ ಧನಂಜಯನು ಗೋಪಣ್ಣನನ್ನು ಸುಮ್ಮನೆ ಹಿಂದಿರುಗಿಸಿ ಬಿಟ್ಟನು.

ಆಮೇಲೆ ಕೂಡಾ ಧನಂಜಯನ ಬಳಿಗೆ ವಾರಕ್ಕೆ ಒಂದು ಸಾರಿ ರಾಜಭಟನು ಬರುತ್ತಿದ್ದನು. ಆ ದಿನ ಸಾಯಂಕಾಲ ಧನಂಜಯನು ರಾಜಭವನಕ್ಕೆ ಹೋಗುತ್ತಿದ್ದನು. ಬಹಳ ಹೊತ್ತಿನ ಮೇಲೆ ಹಿಂದಿರುಗುತ್ತಿದ್ದನು. ಇದನ್ನು ನೋಡುತ್ತಲೇ ಇದ್ದನು ಗೋಪಣ್ಣ. ರಾಜನಿಂದ ಕರೆಯಿಸಿಕೊಂಡು ಧನಂಜಯನು

ರಾಜಭವನಕ್ಕೆ ಹೋಗುವುದರ ಕಾರಣವೇನೆಂದು ಗೋಪಣ್ಣ ಎಷ್ಟು ಎಷ್ಟು ಯೋಚಿಸಿದರೂ ಗೊತ್ತಾಗಲಿಲ್ಲ. ಒಂದು ದಿನ ಅವನು ತನ್ನ ಹೆಂಡತಿ ಯೊಂದಿಗೆ ಈ ಸಂಗತಿಯನ್ನು ಹೇಳಿ, "ಎಷ್ಟು ತಲೆ ಚಚ್ಚಿಕೊಂಡರೂ ನನಗೆ ಇದರೊಳಗಿನ ರಹಸ್ಯ ವೇನೆಂದು ಅರ್ಥವಾಗುವುದೇ ಇಲ್ಲ. ನೀನು ಕೂಡಾ ಸ್ವಲ್ಪ ಆಲೋಚಿಸಿ ಹೇಳು ನೋಡುವಾ" ಎಂದನು.

ಗೋಪಣ್ಣನ ಹೆಂಡತಿ ಗಂಡನನ್ನು ವಿಚಿತ್ರವಾಗಿ ನೋಡುತ್ತ, "ಈ ಸಣ್ಣ ವಿಷಯಕ್ಕೆ ಅಷ್ಟು ತಲೆ ಯೊಡೆದುಕೊಂಡು ಆಲೋಚಿಸಲಿಕ್ಕೇನಿದೆ? ಆ ಧನಂಜಯ ವಾರಕ್ಕೊಂದುಸಾರಿ ಮಹಾರಾಜನ ಬಳಿಗೆ ಹೋಗಿ ಬರುತ್ತಾನೆಂದರೆ ಅವನ ಮೇಲೆ ರಾಜನ ವರ್ಚಸ್ಸು ಬಿದ್ದಿದೆಯೆಂದು ಗೊತ್ತಾಗುತ್ತದಲ್ಲ? ಅದು ನಿಮಗೆ ಗೊತ್ತಾಗಿಲ್ಲವೆಂದರೆ ನಿಮಗೆ ಆಲೋಚನೆ ಮಾಡಲಿಕ್ಕೆ ಗೊತ್ತಿಲ್ಲವೆಂದೇ ಅರ್ಥ" ಎಂದಳು.

ಗೋಪಣ್ಣನಿಗೆ ಹೆಂಡತಿಯ ಮಾತು ಹೌದೆನಿಸಿತು. "ಅದಕ್ಕೆ ತಾನೇ ನಿನ್ನ ಹತ್ತಿರ ಹೇಳಿದೆ? ನೀನು ನನಗಿಂತ ಬುದ್ಧಿವಂತಳು" ಎಂದು ಹೆಂಡತಿಯನ್ನು ಮೆಚ್ಚಿಕೊಂಡನು.

"ನೀವು ನನ್ನನ್ನು ಮೆಚ್ಚಿದ್ದರಿಂದ ಬರುವ ಲಾಭವೇ ನಿಲ್ಲ. ಮೊದಲು ಧನಂಜಯನನ್ನು ಒಳ್ಳೇದುಮಾಡಿ ಇಟ್ಟುಕೊಳ್ಳಿ. ಮುಂದೆ ಸಮಯ ಬಂದಾಗ ಅದರಿಂದ ನಮಗೆ ಲಾಭವಿದೆ" ಎಂದಳು ಗೋಪಣ್ಣನ ಹೆಂಡತಿ.

ಮರುದಿನ ಗೋಪಣ್ಣನು ಹೆಂಡತಿ ಮಾಡಿಕೊಟ್ಟ ಸವಿ ತಿಂಡಿಗಳನ್ನೂ, ಅಂಗಡಿಯಿಂದ ಹತ್ತು ರೂಪಾಯಿಗೆ ಹಣ್ಣುಗಳನ್ನೂ ತಂದು, ಸುಂದರವಾದ ಬುಟ್ಟಿಯಲ್ಲಿ ಅವುಗಳನ್ನು ಇಟ್ಟು, ತೆಗೆದುಕೊಂಡು ಧನಂಜಯನ ಮನೆಗೆ ಹೋದನು.

ಎಂದೂ ತನ್ನ ಮನೆಗೆ ಬಾರದ ಗೋಪಣ್ಣ ತಿಂಡಿ ಹಣ್ಣುಗಳೊಂದಿಗೆ ಬಂದುದನ್ನು ನೋಡಿ ಧನಂಜಯನು ಆಶ್ಚರ್ಯಪಡುತ್ತ, "ಏನಿದು ಹೀಗೆ



ಬಂದೆ? ಇವೆಲ್ಲಾ ಏಕೆ?" ಎಂದು ಕೇಳಿದನು.

"ನಿಮ್ಮ ಮನೆಗೆ ಬರಬೇಕೆಂದು ಬಹಳ ದಿನಗಳಿಂದ ಅಂದುಕೊಳ್ತಾ ಇದ್ದೆ. ಇವತ್ತು ಸಮಯ ದೊರಕಿತು. ಈ ಹಣ್ಣು ತಿಂಡಿಗಳನ್ನು ಮಕ್ಕಳಿಗಾಗಿ ತಂದಿದ್ದೇನೆ. ಇವೇನೂ ದೊಡ್ಡ ಖರ್ಚು ಅಲ್ಲವಷ್ಟೇ?" ಎಂದನು ಗೋಪಣ್ಣ.

ಆಮೇಲೆ ಅವನು ಧನಂಜಯನಿಗೆ ತಮ್ಮ ವ್ಯಾಪಾರದ ವಿಷಯವಾಗಿ ಅದೂ ಇದೂ ಮಾತಾಡಿ ಮನೆಗೆ ಹಿಂತಿರುಗಿದನು. ಆ ದಿನದಿಂದ ಗೋಪಣ್ಣ ಆಗಾಗ ಏನಾದರೂ ತಿಂಡಿ ತೆಗೆದುಕೊಂಡು ಧನಂಜಯನ ಮಕ್ಕಳಿಗೆ ಕೊಟ್ಟು ಎರಡು ಮೂರು ಮಾತುಗಳನ್ನು ಆಡಿ ಹಿಂದಿರುಗುತ್ತಿದ್ದನು.

ಕೆಲವು ದಿನಗಳು ಕಳೆದ ಮೇಲೆ ತೆರಿಗೆ ವಸೂಲು ಮಾಡುವ ರಾಜ ಖಜಾನೆಯ ಉದ್ಯೋಗಸ್ಥನಿಂದ ಗೋಪಣ್ಣನಿಗೆ ನೂರು ಮೊಹರಿ ವೃತ್ತಿ ತೆರಿಗೆಯನ್ನು ಕಟ್ಟತಕ್ಕದ್ದೆಂದು ತಾಕೀತು ಬಂತು.

ಮರುದಿನ ಗೋಪಣ್ಣ ಅಂಗಡಿಗೆ ಹೊರಡುತ್ತ ಹೆಂಡತಿಯೊಂದಿಗೆ "ನಾನು ಸಾಯಂಕಾಲ ತೆರಿಗೆ ಕಚೇರಿಗೆ ಹೋಗಿ ಬರುತ್ತೇನೆ. ತೆರಿಗೆ ಕಟ್ಟಬೇಕಾಗಿದೆ. ಮನೆಗೆ ಬರುವಾಗ ತಡವಾದೀತು" ಎಂದನು.

"ನೀವೇಕೆ ತೆರಿಗೆ ಕಟ್ಟಬೇಕು ?" ಎಂದು ಹೆಂಡತಿ ಆಶ್ಚರ್ಯದಿಂದ ಕೇಳಿದಳು.

ಗೋಪಣ್ಣನು ಅವಳ ಪ್ರಶ್ನೆ ಅರ್ಥವಾಗದೆ, "ಹಾಗಂದರೇನು ? ಆರಾರು ತಿಂಗಳಿಗೊಮ್ಮೆ ಕಟ್ಟು ವಂಥಾದ್ದು ತಾನೇ ?" ಎಂದನು.

"ನಿಮಗೆ ಇಷ್ಟೂ ತಿಳಿಯಬೇಡವೇ ? ನಿಮ್ಮ ಹಾಗೆ ವ್ಯಾಪಾರಿಯಾದ ಧನಂಜಯ ನಿಮ್ಮ ಗೆಳೆಯ. ಆತನ ಮೇಲೆ ಮಹಾರಾಜರ ಪ್ರಭಾವವಿದೆ. ಹಾಗಿರುವಾಗ ನೀವು ತೆರಿಗೆ ಕಟ್ಟದಿದ್ದರೆ ಅಧಿಕಾರಿ ಏನು ತಾನೇ ಮಾಡುವರು ? ಧನಂಜಯರು ಒಂದು ಮಾತು ಹೇಳಿದರೆ ಮಹಾರಾಜರು ನಿಮ್ಮ ಮೇಲೆ ಯಾವ ತಪ್ಪೂ ಹಾಕಲಾರರು. ಸ್ವಲ್ಪ ಬುದ್ಧಿ ಉಪಯೋಗಿಸಿ ನೋಡಿ" ಎಂದಳು ಹೆಂಡತಿ.

ಗೋಪಣ್ಣನಿಗೆ ಹೆಂಡತಿಯ ಮಾತು ರುಚಿಸಿತು. ಅವನು ತೆರಿಗೆ ಕಟ್ಟುವ ಚಿಂತೆಬಿಟ್ಟು ಸುಮ್ಮ ನಿದ್ದನು. ಧನಂಜಯನ ಹತ್ತಿರ ಹೇಳಿದಾಗ, "ಅದೇನೂ ದೊಡ್ಡದಲ್ಲ" ಎಂದು ಹೇಳಿದನು. ಎಂಟುದಿನಗಳ ಮೇಲೆ ಒಬ್ಬ ರಾಜಭಟನು ಗೋಪಣ್ಣನ ಬಳಿಗೆ ಬಂದು, "ನಿಮ್ಮನ್ನು ಮಹಾ ರಾಜರು ಸಾಯಂಕಾಲ ಪ್ರತ್ಯೇಕ ಮಂದಿರಕ್ಕೆ ಬಂದು ಕಾಣಬೇಕೆಂದು ಅಪ್ಪಣೆ ಮಾಡಿದ್ದಾರೆ" ಎಂದು ಹೇಳಿ ಹೊರಟುಹೋದನು.

ಧನಂಜಯನ ಕಾರಣದಿಂದ ತನಗೂ ಮಹಾ ರಾಜರ ಆದರಣೆ ದೊರಕುವುದೆಂಬ ಆನಂದದಲ್ಲಿ ಆ ದಿನ ಸಾಯಂಕಾಲ ಅವನು ರಾಜನ ಪ್ರತ್ಯೇಕ ಮಂದಿರಕ್ಕೆ ಹೋದನು.

ರಾಜನು ಅವನನ್ನು ನೋಡಿ, "ನಿನ್ನನ್ನು ಏಕೆ ಕರೆಸಿದ್ದು ಗೊತ್ತಾಯಿತೆ ? ಈ ಮಂದಿರವನ್ನೆಲ್ಲಾ ಗುಡಿಸಿ ಬಳಿದು ಒರೆಸಿ ಶುದ್ಧಮಾಡಿಸಲಿಕ್ಕೆ. ಕಳೆದ ವಾರದವರೆಗೆ ಧನಂಜಯನೆಂಬ ವ್ಯಾಪಾರಸ್ಥ ಈ ಕೆಲಸ ಮಾಡಿಕೊಂಡಿದ್ದ. ಅವನ ಅವಧಿ ಮುಗಿಯಿತು. ಈ ವಾರದಿಂದ ಆ ಕೆಲಸ ನೀನು ಮಾಡಬೇಕು. ಇದನ್ನು ನಿನಗೆ ನೆನಪುಮಾಡಲು ಇಲ್ಲಿ ಕಸಕಪ್ಪು ಸೇರಿದಾಗ ಒಬ್ಬ ಭಟನು ಬಂದು ನಿನಗೆ ನೆನಪು ಕೊಡುತ್ತಾನೆ. ತೆರಿಗೆ ಕಟ್ಟಲು ಉದಾಸೀನ ಮಾಡುವ ನಿಮ್ಮಂಥ ವ್ಯಾಪಾರಿಗಳಿಗೆ ಇದೇ ತಕ್ಕ ಶಿಕ್ಷೆ. ಆರು ತಿಂಗಳ ವರೆಗೆ ಈ ಕೆಲಸ ಮಾಡಬೇಕು, ಜಾಗ್ರತೆ!" ಎಂದನು.

ಗೋಪಣ್ಣ ಕಿಂಕಂ ಎನ್ನದೆ ಕಸಪೊರಕೆ ಹಿಡಿದು ರಾಜಾಜ್ಞೆಯನ್ನು ಪಾಲಿಸಿಕೊಂಡು ಬಂದನು.






**ಕೋ**ಣೆಯ ಹೊರಗೆ ಅಷ್ಟೊಂದು ಕೋಲಾಹಲ ನಡೆಯುತ್ತಿದ್ದರೂ, ಒಳಗೆ ನಿದ್ರಿಸಿಕೊಂಡಿದ್ದ ರೈತನಿಗೆ ಎಚ್ಚರವಾಗಲೇ ಇಲ್ಲ. ಅವನ ಬದಿಯಲ್ಲಿ ಪತ್ರ ಪುಷ್ಪಗಳಿಂದ ಅಲಂಕೃತವಾದ ಗಣೇಶನ ವಿಗ್ರಹ ವಿದ್ದಿತು. ನೆಲದಲ್ಲೆಲ್ಲಾ ಕಬ್ಬಿನ ರಸ ಪಾನಕದ ಜೊಲ್ಲು ಕೆಸರಿನಂತೆ ಕಾಣುತ್ತಿತ್ತು.

ಜಮೀನ್ದಾರನು ಇದೇನೆಂದು ಕಾವಲಿನವರನ್ನು ಕೇಳಿದನು. ಕಾವಲಿನವರು ನಡುಗುವ ಕಂಠದಿಂದ, “ಅಯ್ಯಾ, ಬಹಳ ರಾತ್ರಿಯಾಗಿ ಹೋಗಿತ್ತು. ಒಳಗಿರುವ ಆ ರೈತ ಯಾವ ಚಿಂತೆಯೂ ಇಲ್ಲದೆ ನಿದ್ದೆ ಮಾಡುವುದನ್ನು ನೋಡಿ ನಮಗೆ ಆಶ್ಚರ್ಯವಾಗುತ್ತಾ ಇತ್ತು. ನಮಗೂ ಹಾಗೆಯೇ ತೂಕಡಿಕೆ ಶುರು ವಾಯಿತು. ಸ್ವಲ್ಪ ಹೊತ್ತು ಏನಾಯಿತೆಂದೇ ನಮಗೆ ಗೊತ್ತಾಗಲಿಲ್ಲ. ಆನೆಯ ಕಾಲಡಿ ಶಬ್ದ, ಶ್ವಾಸ, ಕೂಗು ಕೇಳಿ ಥಕ್ಕನೆ ನಮ್ಮ ನಿದ್ದೆಯ ಮತ್ತು ಇಳಿದು ಹೋಯಿತು. ದೊಡ್ಡದೊಂದು ಬೆಳ್ಳಗಿನ ಆನೆ ರೈತನ ಕೋಣೆಯೊಳಗೆ ಸೇರಿತ್ತು. ಹೇಗೆ ಬಂತೋ ದೇವರೇ ಬಲ್ಲ. ಮಲಗಿದ ಹಾಗೇ ಇರುವ ರೈತನನ್ನು ನೋಡಿ ಸತ್ತನೇನೋ ಅಂದುಕೊಂಡೆವು. ಪಕ್ಕದಲ್ಲಿ ಕಬ್ಬಿನ ಜಲ್ಲೆಗಳನ್ನು ಸೊಂಡಿಲಿನಿಂದೆತ್ತಿ ಬಾಯಿಯೊಳಗೆ ಹಾಕಿ ಜಗಿದು ರಸ ಕುಡಿಯುವ ಆನೆಯ ಶಬ್ದಕ್ಕೆ ಅವನಿಗೆ ಎಚ್ಚರವೇ ಆಗಿಲ್ಲ! ಕಬ್ಬೆಲ್ಲಾ ಹಿಪ್ಪೆಯ ಪರ್ವತವಾಗುವುದನ್ನು ನೋಡಿ ಹೆದರಿ ನಾವು ದೂರ ಓಡಿದೆವು” ಎಂದು ಹೇಳಿದರು.

ಮುಚ್ಚಿದ ಕೋಣೆಯೊಳಗೆ ಆನೆ ನುಳಿಯುವುದೆಂದರೇನು ? ಜಮೀನ್ದಾರನಲ್ಲಿ ದೊಡ್ಡದೊಂದು ಪರಿವರ್ತನೆಯುಂಟಾಗುತ್ತ ರೋಮಾಂಚಿತನಾದನು. ಅವನು ಭಾವಪರವಶತೆಯಲ್ಲಿ ನಡುಗುತ್ತ ಕೋಣೆಯೊಳಗೆ ಹೋಗಿ, ರೈತನ ಪಾದಗಳನ್ನು ಹಿಡಿಯುವವನಂತೆ ಬಿದ್ದನು.

ಆಗ ರೈತನು ಕನಸಿನ ಲೋಕದಿಂದ ಇಳಿದವನಂತೆ ಎದ್ದುನಿಂತನು. ಜಮೀನ್ದಾರನು ಅವನ ಪಾದಗಳ ಮೇಲೆ ತಲೆಯನ್ನು ತಿಕ್ಕುತ್ತ, ಕಣ್ಣೀರಿನಿಂದ ತೊಳೆಯುತ್ತಿರಲು, ಆತನ ಹೆಂಡತಿ ಅಲ್ಲಿದ್ದ



ನಿನ್ನಮೇಲೆ ಹಾಕಿ ಪೂಜಿಸಲಿಲ್ಲ. ನಿನಗಾಗಿ ಕಳುಹಿಸಿದ ಕಬ್ಬು ನಿನಗೆ ನೈವೇದ್ಯಮಾಡಲೂ ಇಲ್ಲ. ನನ್ನಂಥ ಅಲ್ಪದವನಿಗಾಗಿ ಇಷ್ಟು ಶ್ರಮಪಡುವ ಅಗತ್ಯವೇನು ಬಂತು ಸ್ವಾಮಿ? ಆನೆಯ ರೂಪದಲ್ಲಿ ಎಲ್ಲರಿಗೂ ದರ್ಶನ ಕೊಟ್ಟ ನೀನು ನನಗೆ ಕಾಣಲೇ ಇಲ್ಲ. ನಿದ್ದೆಯಲ್ಲಿ ಮುಳುಗಿದ ದುರ್ಭಾಗ್ಯದ ಮೊದ್ದಪ್ಪ ನಾನು!" ಎಂದು ಸಣ್ಣ ಹುಡುಗನ ಹಾಗೆ ಕಣ್ಣೀರು ಸುರಿಸಿಕೊಂಡನು.

ಆಗ ವಿಗ್ರಹದ ಸ್ಥಾನದಲ್ಲಿ ಕಬ್ಬಿನ ಜಲ್ಲೆಯನ್ನು ಹಿಡಿದುಕೊಂಡು ವಿಘ್ನೇಶ್ವರನು ಆ ರೈತನ ಮುಂದೆ ಪ್ರತ್ಯಕ್ಷನಾದನು. ರೈತನ ಮಗನು ಎತ್ತಿಕೊಂಡು ಹೋದ ಕಬ್ಬಿನ ಕೋಲೇ ಅವನ ಕೈಯಲ್ಲಿದ್ದಿತು.

ವಿಘ್ನೇಶ್ವರನು ತನ್ನ ಸೊಂಡಿಲಿನಿಂದ ರೈತನನ್ನು ಹತ್ತಿರಕ್ಕೆ ಎಳೆದುಕೊಂಡು. "ಅಪ್ಪಾ, ಅಳಬೇಡ. ಉಳಿದವರಿಗೆ ಆನೆಯಾಗಿ ಕಂಡ ನಾನು ನಿನಗೆ ಆನೆಯ ಮುಖದ ಗುಂಡೋದರನಾಗಿ ಕಾಣಿಸುತ್ತೇನೆ. ಈ ನಿಮ್ಮ ಜಾತಿ ಕುಲ ಗೋತ್ರ ಆಚಾರಗಳನ್ನೆಲ್ಲಾ ನಾನು ಕಲ್ಪಿಸಿದವನಲ್ಲ. ಎಲ್ಲಾ ಮನುಷ್ಯರೇ ಕಲ್ಪಿಸಿಕೊಂಡು ತಾರತಮ್ಯವಿಟ್ಟಿದ್ದಾರೆ. ನನ್ನ ಹತ್ತಿರ ಆ ಹೆಚ್ಚು ಕಡಿಮೆಗಳ, ತಾರತಮ್ಯಗಳಿಗೆ ಸ್ಥಾನವಿಲ್ಲ. ನಾನು ನಿಮಗೆಲ್ಲರಿಗೂ ಸೇರಿದವನೇ" ಎಂದು ಹೇಳಿ ಅಂತರ್ಧಾನನಾದನು.

ಅಲ್ಲಿ ಕೂಡಿದ ಜನರೆಲ್ಲಾ ಕೈಗಳನ್ನೆತ್ತಿ ಜೋಡಿಸಿ ಆ ರೈತನಿಗೆ ನಮಸ್ಕರಿಸುತ್ತ "ಆಹಾ ನೀನು ರೈತನಲ್ಲಾ! ಗಣಪತಿಯಮೂರ್ತಿ! ನಿನ್ನಲ್ಲೇ ನಾವೆಲ್ಲಾ ಮಹಾ ಗಣಪತಿಯನ್ನು ಕಂಡೆವು!" ಎಂದು ಪದೇ ಪದೇ ವಂದಿಸಿದರು. ಜಮೀನ್ದಾರನಂತೂ ರೈತನಿಗೆ ಬ್ರಹ್ಮರಥವನ್ನೇ ಹಿಡಿದನು. ಅವನ ಜಂಬ ದರ್ಪಗಳೆಲ್ಲಾ ಪೂರ್ತಿ ಹಾರಿ ಹೋದುವು.

ಹೀಗೆ ಕಥೆಯನ್ನು ಮುಗಿಸುತ್ತ ಬಾವನ ಮಿಶ್ರನು "ಇಕ್ಷು ಅಂದರೆ ಕಬ್ಬು. ಸಾವಿರ ಕಬ್ಬುಗಳ ಗಣಪತಿ

ವಿಘ್ನೇಶ್ವರನ ಮುಂದೆ ಅಡ್ಡಬಿದ್ದು "ದೇವಾ, ಇಷ್ಟು ದಿನಗಳ ಮೇಲೆ ನಮ್ಮನ್ನು ಅನುಗ್ರಹಿಸಿದೆಯಾ! ನಾವೆಲ್ಲಾ ಧನ್ಯರಾದೆವು ಸ್ವಾಮಿ!" ಎಂದು ಪ್ರಾರ್ಥಿಸಿಕೊಂಡಳು. ಆಮೇಲೆ ರೈತನೊಂದಿಗೆ ನಡೆದ ಸಂಗತಿಯನ್ನೆಲ್ಲಾ ಅವಳೇ ಹೇಳಿದಳು.

ಈ ಮಹಾ ಅದ್ಭುತದ ಸಮಾಚಾರವು ಕ್ಷಣ ಮಾತ್ರದಲ್ಲಿ ಊರೊಳಗೆಲ್ಲಾ ಹರಡಿತು. ಜನರು ತಂಡೋಪತಂಡವಾಗಿ ಜಮೀನ್ದಾರನ ಮನೆಗೆ ಬರತೊಡಗಿದರು. ಕಬ್ಬಿನ ಕೋಣೆಯಲ್ಲಿದ್ದ ಆನೆಯ ಪಾದ ಬಿದ್ದ ಗುಳಿಗಳಲ್ಲಿ ಸೇರಿದ್ದ ಕಬ್ಬಿನ ರಸವನ್ನು ತೀರ್ಥದಂತೆ ಸೇವಿಸಿದರು. ಕಬ್ಬಿನ ಹಿಪ್ಪೆಯನ್ನು ವಿಘ್ನೇಶ್ವರನ ಮಹಾ ಪ್ರಸಾದವೆಂದುಕೊಂಡು ಒಯ್ದು ತಲೆಯಲ್ಲಿ ಧರಿಸಿಕೊಂಡರು.

ರೈತನು ಹೆಂಡತಿಯೊಂದಿಗೂ, ಮಗನೊಂದಿಗೂ ವಿನಾಯಕ ವಿಗ್ರಹಕ್ಕೇ ನಮಸ್ಕಾರ ಮಾಡುತ್ತ, "ನಾನೊಬ್ಬ ಶುಂಠ. ಸಣ್ಣದೊಂದು ಪತ್ರದ ಚೂರೂ

ಎಂಬಂತೆ ಸಹಸ್ರೇಕ್ಷು ಗಣಪತಿ ಎಂದು ಪ್ರಸಿದ್ಧನಾದ ಗಣಪತಿಯ ಈ ಕಥೆಯನ್ನು ಕೇಳಿದಿರಿ. ಆ ಜಾಗದಲ್ಲಿ ಕಬ್ಬಿನ ಜಲ್ಲೆಯನ್ನು ಹಿಡಿದ ಗಣಪತಿಯ ವಿಗ್ರಹವು ಪ್ರತಿಷ್ಠಿತವಾಗಿ. ದೊಡ್ಡ ದೇವಾಲಯವು ಎದ್ದಿತು" ಎಂದು ಮುಗಿಸಿದನು.

ಆಲಯ ಮಂಟಪದೊಳಗಿನ ಚಿತ್ರಗಳ ಕಥೆಗಳನ್ನು ಪಾವನ ಮಿಶ್ರನು ಹೇಳುತ್ತಿದ್ದನೇ ಹೊರತು, ಮುಖ ದ್ವಾರದ ಹತ್ತಿರ ಚಿತ್ರಿಸಲ್ಪಟ್ಟ ಚಿತ್ರವು ಮಾತ್ರ ಹಾಗೆಯೇ ಉಳಿದುಹೋಯಿತು. ಅದು ಬಹಳ ದೊಡ್ಡ ಚಿತ್ರವಾಗಿತ್ತು. ಚಿತ್ರಲೇಖನ ಪ್ರತಿಭೆಗಳೆಲ್ಲಾ ಅದರಲ್ಲಿ ಅಡಕವಾಗಿತ್ತು. ಒಬ್ಬ ಯುವಕನು ಪ್ರತಿ ದಿನವೂ ಆ ಚಿತ್ರದ ಮುಂದೆ ಬಹಳ ಹೊತ್ತಿನವರೆಗೆ ತದೇಕ ಚಿತ್ತನಾಗಿ ನೋಡುವನು. ಕಡೆಗೆ ಒಂದು ದಿನ ಅವನು ಪಾವನ ಮಿಶ್ರನ ಪಾದಗಳಿಗೆ ಮಣಿದು, "ಮಹಾಶಯಾ, ಈ ಆಲಯ ಮಂಟಪದ ಚಿತ್ರ ಗಳನ್ನು ಚಿತ್ರಿಸಿದವರು ಯಾರೆಂದು ಗೊತ್ತಿದೆಯೆ? ಆ ಮಹಾಶಿಲ್ಪಿ ಚಿತ್ರಕಾರನ ಚರಿತ್ರೆ ತಿಳಿಯಬೇಕೆಂದು ಬಹಳ ಆಸೆಯಾಗಿದೆ. ಆ ಮುಖದ್ವಾರದಲ್ಲಿರುವ ಚಿತ್ರ ನೋಡುತ್ತಿದ್ದರೆ, ನನ್ನ ಕಣ್ಮನಗಳೆರಡೂ ಅಲ್ಲೇ ಸಿಕ್ಕಿಕೊಳ್ಳುತ್ತವೆ. ಅದರ ವಿವರಗಳೇನೋ ಗೊತ್ತಾಗ ಲಿಲ್ಲ. ಆ ಚಿತ್ರದ ಕಥಾ ವಿವರಗಳನ್ನು ತಿಳಿಸಿ ಈ ಚಿತ್ರ ಚರಿತ್ರೆಯನ್ನು ಸಂಪೂರ್ಣ ಮಾಡುವಿರಾ?" ಎಂದು ಕೇಳಿಕೊಂಡನು.

ಪಾವನ ಮಿಶ್ರನು ಆ ಯುವಕನನ್ನು ಸಾದರ ನಯನಗಳಿಂದ ನೋಡಿ, "ಅಪ್ಪಾ, ನಿನ್ನನ್ನು ನೋಡಿದರೆ ಚಿತ್ರಕಾರನ ಹಾಗೆಯೇ ಕಾಣುವಿ. ಮುಖದ್ವಾರದಲ್ಲಿರುವ ಚಿತ್ರವು ನನಗೂ ಅಭಿಮಾನ ವುಳ್ಳದ್ದಾಗಿದೆ. ಅದರ ವಿವರಗಳನ್ನು ಆಮೇಲೆ ಹೇಳಿ ವಿಘ್ನೇಶ್ವರ ಚರಿತ್ರೆಯನ್ನು ಮುಗಿಸುತ್ತೇನೆ. ನೀನು ಕೇಳಿದ ಚಿತ್ರಶಿಲ್ಪಿಗೆ ಒಳ್ಳೆಯ ಚರಿತ್ರೆ ಇರು ವುದು ನಿಜವೇ. ನಿನಗೂ ಅದನ್ನು ಕೇಳುವ



ಕುತೂಹಲ ತುಂಬಾ ಇರುವಂತೆ ಕಾಣುತ್ತದೆ. ಕೇಳಪ್ಪ" ಎಂದು ಕಣ್ಣುಗಳನ್ನು ಮುಚ್ಚಿ ಏನನ್ನೋ ನೆನೆಸಿ ಕೊಂಡು, ಸ್ವಲ್ಪ ಹೊತ್ತಿನ ಮೇಲೆ ಹೇಳಲು ತೊಡಗಿದನು :

ಒಂದು ಸಾರಿ ವಾತಾಪಿನಗರಕ್ಕೆ ಸಾಧುಗಳ ಗುಂಪೊಂದು ಬಂದಿತು. ಅವರೊಳಗೆ ಹದಿನಾಲ್ಕು ವಯಸ್ಸಿನ ಬಾಲಕನೊಬ್ಬನೂ ಇದ್ದನು. ಸಾಧುಗಳೆಲ್ಲ ಇಲ್ಲಿನ ಸೇವೆ ಮುಗಿಸಿ ಮುಂದೆ ಹೊರಟುಹೋದರೂ ಆ ಬಾಲಕನು ಮಾತ್ರ ವಾತಾಪಿ ಗಣಪತಿಯ ಆಲಯವನ್ನು ಬಿಡದೆ ಅಲ್ಲಿಯೇ ಇದ್ದನು. ಅವನು ಅಲ್ಲಿಂದ ಹೊರಟು ಹೋಗುವವನಂತೆ ಕಾಣಲಿಲ್ಲ.

ಅವನ ಊರಾವುದು, ಹೆಸರೇನು ಎಂಬುದು ಅವನಿಗೇ ತಿಳಿಯದು. ಅವನ ನೊಸಲಿನಲ್ಲಿ ದೊಡ್ಡ ದೊಂದು ಗಾಯವು ಮಾಸಿ ಹೋದ ಗುರುತಿದ್ದಿತು. ಅದನ್ನು ನೋಡಿದವರು ಎಲ್ಲೋ ಬಿದ್ದು ಸ್ಮೃತಿ ತಪ್ಪಿ ಹೋದವನಿರಬೇಕೆಂದು ಎಲ್ಲರೂ ಅಂದು



ಯಿಂದ ಕೇಳುತ್ತಿದ್ದನು. ಕಥೆ ಕೇಳಿದ ಮರುದಿನ ಆ ಕಥೆಗೆ ಸಂಬಂಧಿಸಿದ ಚಿತ್ರಗಳನ್ನು ಯಾವುದಾದರೂ ಗೋಡೆಯಲ್ಲಿ ಬರೆಯುತ್ತಿದ್ದನು. ಆಗ ಅವನಿಗೆ ಬಹಳ ಉತ್ಸಾಹವೆನಿಸಿ ಹೊತ್ತು ಹೋಗುವುದೇ ತಿಳಿಯದು.

ಗಜಾನನ ಪಂಡಿತನಿಗೆ ವಿಚಿತ್ರನ ಮೇಲೆ ಅತ್ಯಂತ ವಾತ್ಸಲ್ಯವುಂಟಾಗಿತ್ತು. ಮನೆಯೊಳಗೆ ಬಾರೆಂದು ಕರೆದರೆ ವಿಚಿತ್ರನು ಮುಂಬಾಗಿಲಿನ ಹೊಸ್ತಿಲಿನ ಹೊರಗೇ ಕುಳಿತುಕೊಂಡು ಕಥೆಯನ್ನು ಕೇಳುವನು. "ಸ್ವಾಮಿ, ಇಲ್ಲಿ ಕುಳಿತುಕೊಂಡು ಕೇಳುವಾಗ ನೀವು ನನಗೊಬ್ಬನಿಗೇ ಬಹಳ ಚೆನ್ನಾಗಿ ಕಥೆ ಹೇಳುವಂತೆ ಕೇಳಿಸುತ್ತದೆ" ಎನ್ನುವನು ವಿಚಿತ್ರ. ಕಥೆಗಳಿಗೆ ಅವನು ಚಿತ್ರಿಸಿದ ವಿಘ್ನೇಶ್ವರನ ಚಿತ್ರಗಳನ್ನು ನೋಡಿ ಗಜಾನನ ಪಂಡಿತನು ಮುಗ್ಧನಾಗಿ, ವಿಘ್ನೇಶ್ವರನ ಸಂಬಂಧವಾದ ಅನೇಕ ಕಥೆಗಳನ್ನು ಪ್ರತ್ಯೇಕವಾಗಿ ಅವನಿಗೆ ಹೇಳುತ್ತಿದ್ದನು.

ವಿಚಿತ್ರನ ಹಿಂದೆ ಯಾವಾಗಲೂ ಕೆಲವರು ಅವನಂತಹ ಹುಡುಗರು ಗುಂಪಾಗಿರುತ್ತಿದ್ದರು. ಅವನು ಚಿತ್ರಗಳನ್ನು ಬರೆಯುವಾಗ ನಿಶ್ಶಬ್ದವಾಗಿ ನೋಡಿ ಆನಂದಿಸುತ್ತ, ಆಮೇಲೆ ಅವರು ಕೂಡಾ ಚಿಕ್ಕ ಚಿಕ್ಕ ಚಿತ್ರಗಳನ್ನು ಬರೆಯುವರು. ಹೀಗೆ ಚಿತ್ರಕಲೆ ಚಟದಂತೆ ಊರೊಳಗಿನ ಹುಡುಗರಿಗೆ ಕೂಡ ಅಂಟಿಕೊಂಡಿತು.

ವಿಚಿತ್ರನು ಹಗಲು ಊರೊಳಗೆ ತಿರುಗುವಾಗ ಬೀದಿಗಳ ಗೋಡೆಗಳ ಮೇಲೆ, ಕಂದು ಮಣ್ಣಿನ ಗೆಡ್ಡೆಯಿಂದಲೋ, ಜೇಡಿ ಮಣ್ಣಿನಿಂದಲೋ ಚಿತ್ರಗಳನ್ನು ಬರೆಯುತ್ತ, ವಾತಾಪಿಗಣಪತಿ ಆಲಯದಲ್ಲಿ ಹಂಚಿಕೊಡುವ ಪ್ರಸಾದದಿಂದಲೇ ದಿನಗಳೆಯುತ್ತಿದ್ದನು. ರಾತ್ರಿ ಆಲಯ ಮಂಟಪದ ಮೆಟ್ಟಿಲಿನ ಮೇಲೋ, ಊರಹೊರಗಿನ ಯಾವ ಮನೆಯ ಜಗಲಿಯ ಬದಿಯಲ್ಲಿಯೋ ಮಲಗಿ ನಿದ್ರಿಸುವನು.

ಕೊಂಡರು. ಆ ಬಾಲನು ಮೂಗನಲ್ಲವೆಂಬಷ್ಟೆ ಬಹಳ ಸ್ವಲ್ಪ ಮಾತಾಡುತ್ತಿದ್ದನು. ಕುಳಿತಲ್ಲಿ ನೆಲದ ಮೇಲೆ, ಗೋಡೆಗಳ ಮೇಲೆ ಚಿತ್ರಗಳನ್ನು ಬರೆಯುತ್ತಿದ್ದನು. ಚಿತ್ರ ಬರೆಯುವಾಗ ಅವನ ಮುಖವು ಪೂರ್ಣ ಚಂದ್ರನ ಬಿಂಬದಂತೆ ಬೆಳಗುತ್ತ ಮುಗುಳು ನಗು ಲಾಸ್ಯವಾಡುತ್ತಿತ್ತು. ಆದುದರಿಂದ, ಅವನನ್ನು ಚಿತ್ರಾನಂದ ಎಂದರು. ಇನ್ನು ಕೆಲವರು ಚಿತ್ರಮುಖನೆಂದರು, ಅವನು ಹೆಚ್ಚಾಗಿ ವಿಘ್ನೇಶ್ವರನ ಚಿತ್ರಗಳನ್ನೇ ಬರೆಯುವುದರಿಂದ ವಿಘ್ನೇಶ್ವರ ಚಿತ್ರಕಾರ ಎಂಬ ಹೆಸರನ್ನು ಲುಪ್ತಾಕ್ಷರಿಯಾಗಿ ಮಾಡಿ, ವಿಚಿತ್ರನೆಂದು ಅನೇಕರು ಅವನನ್ನು ಸಂಬೋಧಿಸಿದರು. ಕಡೆಗೆ ವಿಚಿತ್ರನೆಂಬ ಹೆಸರೇ ನೆಲೆಯಾಯಿತು.

ಆ ಹೊತ್ತಿಗೆ ಗಜಾನನ ಪಂಡಿತನು ಬಹಳ ವೃದ್ಧನಾಗಿದ್ದನು. ಪ್ರತಿ ದಿನ ಸಾಯಂಕಾಲ ಮನೆಯ ಹತ್ತಿರವೇ ಹುಡುಗರಿಗೆ ವಿಘ್ನೇಶ್ವರನ ಕಥೆಗಳನ್ನು ಹೇಳುತ್ತಿದ್ದನು. ವಿಚಿತ್ರನು ಆ ಕಥೆಗಳನ್ನು ಅತ್ಯಾಸಕ್ತಿ



ಊರ ಹೊರಗೆ ಅವನು ಮಲಗುವುದು ಕುಂಬಾರ ಕೇರಿಯಾಗಿತ್ತು. ಅದರ ಹತ್ತಿರವೇ ಚರ್ಮಕಾರರೂ ಇದ್ದರು. ಅವರಿಗೆಲ್ಲಾ ವಿಚಿತ್ರನ ಮೇಲೆ ಬಲು ಪ್ರೀತಿ. ಯಾವ ಅಪರಾತ್ರಿಯ ಹೊತ್ತಿನಲ್ಲಿ ವಿಚಿತ್ರನು ಬಂದರೂ, ಅವನಿಗಾಗಿ ತೆಗೆದಿಟ್ಟ ತಿಂಡಿಯನ್ನು ಪ್ರೀತಿಯಿಂದ ಕೊಟ್ಟು ತಿನ್ನಿಸುವರು. ಮಲಗಲು ಅವನಿಗೆ ಚಾಪೆ ಹಾಸು ವಸ್ತ್ರಗಳನ್ನು ಕೂಡಾ ಕೊಡುವರು. ಹೀಗೆ ಅವನು ಕೇರಿಗಾರರೆಲ್ಲರಿಗೂ ಮಗನಂತಾದನು. ಈ ರೀತಿಯಾಗಿ ವಿಚಿತ್ರನು ಬೆಳೆದು ದೊಡ್ಡವನಾದನು.

ತಾನು ಯಾರೆಂಬುದನ್ನು ಅರಿಯದೆ ಮರೆತು ಹೋದ ವಿಚಿತ್ರನಿಗೆ ನಿಜಕ್ಕೂ ತಾಯಿ ತಂದೆ ಅಣ್ಣಂದಿರೂ ಇದ್ದರು. ಅವನು ಅವರನ್ನೆಲ್ಲ ಹೇಗೆ ಅಗಲಿದನೆಂದರೆ.

ವಾತಾಪಿನಗರಕ್ಕೆ ಸ್ವಲ್ಪ ದೂರದಲ್ಲಿರುವ ಒಂದು ಊರಿನಲ್ಲಿರುವ ಮಧ್ಯಮ ತರಗತಿಯ ಕುಟುಂಬದಲ್ಲಿ ವಿಚಿತ್ರನು ಹುಟ್ಟಿದ್ದನು. ತಂದೆಯ ಮೂಲಕವಾಗಿಯೇ ಅವನಿಗೆ ಚಿಕ್ಕಂದಿನಲ್ಲೇ ಚಿತ್ರ ಗೀಚುವ ಅಭ್ಯಾಸ ಅಂಟಿತ್ತು. ಅವನ ತಂದೆ ಮಣ್ಣಿನ ಬೊಂಬೆಗಳನ್ನು ಮಾಡಿ ಮಾರುವವನಾಗಿದ್ದನು. ಆದರೆ ತನ್ನ ಮಕ್ಕಳು ಬೇರೆ ವೃತ್ತಿಯಿಂದ ಬೆಳಗಬೇಕೆಂದು ತಂದೆಯ ಆಸೆ, ಅದಕ್ಕಾಗಿ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ತೊಡಗಿಸಿದ್ದನು, ವಿಚಿತ್ರನಿಗೆ ಚಿತ್ರ ಬರೆಯುವುದರಲ್ಲಿರುವ ಆಸಕ್ತಿ ಬೇರೆ ವಿದ್ಯೆಗಳ ಮೇಲೆ ಇರಲಿಲ್ಲ, ಅದರಿಂದ ಅವನ ಅಣ್ಣಂದಿರೂ ಅತ್ತಿಗೆಯರೂ ಅವನಿಗೆ ಛೀಮಾರಿ ಹಾಕಿ ಮನೆಯಿಂದ ಓಡಿಸಿ ಬಿಟ್ಟರು, ಆ ಹುಡುಗನಿಗೆ ವಿಘ್ನೇಶ್ವರನ ಮೇಲೆ ಬಹಳ ಇಷ್ಟ. ವಾತಾಪಿ ವಿಘ್ನೇಶ್ವರನ ಮಹಿಮೆಗಳನ್ನು ಎಷ್ಟೋ ಕೇಳಿದ್ದನು. ಅಂತಲೇ ಅಲ್ಲಿಗೆ ಹೊರಟು ಬರುತ್ತ. ದಾರಿಯಲ್ಲಿ ತಿಂಡಿ ತೀರ್ಥಗಳೇನೂ ಸಿಗದೆ, ಆಯಾಸ ಓಂದ ಮಾರ್ಗ ಮಧ್ಯದ ಒಂದು ದೊರಗು ಕಲ್ಲಿನ ಮೇಲೆ ಬಿದ್ದುಕೊಂಡಿದ್ದನು. ಬಿದ್ದ ಪೆಟ್ಟಿನಿಂದ ಗಾಯಗೊಂಡು ಮೂರ್ಛಿತನಾದವನನ್ನು ಸಾಧುಗಳ ಗುಂಪು ಕಾಪಾಡಿ, ವಾತಾಪಿನಗರಕ್ಕೆ ಕರೆ ತಂದು ಬಿಟ್ಟಿತ್ತು. ಇದು ವಿಚಿತ್ರನ ಬಾಲ್ಯ ಚರಿತ್ರೆ.

ಆಮೇಲೆ ಏನಾಯಿತೆಂದರೆ, ಆ ವರ್ಷದ ವಿನಾಯಕ ಚತುರ್ಥಿ ಸಮೀಪಿಸುತ್ತಿತ್ತು. ಆ ಉತ್ಸವಕ್ಕೆ ಒಂದು ವಿಶೇಷ ಪ್ರದರ್ಶನದ ಏರ್ಪಾಡು ನಡೆಯ ತೊಡಗಿತು.

ಆಳೆತ್ತರದ ವಿನಾಯಕ ವಿಗ್ರಹಗಳನ್ನು ಚಿತ್ರಕಳಾ ಪ್ರತಿಭೆಯನ್ನು ತೋರಿಸುವಂತೆ ಬಣ್ಣಗಳನ್ನು ಹಾಕಿ ಪ್ರದರ್ಶನದಲ್ಲಿ ಇರಿಸುವಂತಹ ಹೊಸ ಏರ್ಪಾಡು ಅದು. ಎಲ್ಲಕ್ಕಿಂತಲೂ ಉತ್ತಮವಾಗಿ ತೋರುವ ವಿಗ್ರಹಕ್ಕೆ ಸಾವಿರ ಚಿನ್ನದ ನಾಣ್ಯಗಳನ್ನು ಕೊಟ್ಟು, ನವರಾತ್ರಿಯ ಉತ್ಸವವನ್ನು ನಿರ್ವಹಿಸುವವರು ಕೊಂಡುಕೊಳ್ಳುತ್ತಾರೆ. ರತ್ನಖಚಿತವಾದ ಸ್ವರ್ಣ ಕಂಕಣಗಳನ್ನು ನಗರಪಾಲಕರು ಆ ಚಿತ್ರಕಾರನಿಗೆ ಬಹುಮಾನ ಕೊಡುತ್ತಾರೆ. ಆದುದರಿಂದ ಚಿತ್ರ




ಶಿಲ್ಪಿಗಳಿಗೆಲ್ಲಾ ಉತ್ತೇಜನಕಾರಿಯಾಗಿ, ಅದೊಂದು ಸ್ಪರ್ಧೆಯ ಪ್ರದರ್ಶನವೇ ಆಯಿತು.

ಇಂತಹ ವಿಶೇಷ ಪ್ರದರ್ಶನಕ್ಕಾಗಿ ಆಸ್ಥಾನದ ಚಿತ್ರಕಾರರೂ, ದೊಡ್ಡದೊಡ್ಡ ಚಿತ್ರಕಲಾ ನಿಪುಣರೂ ತುಂಬಾ ಹಣವನ್ನು ವೆಚ್ಚ ಮಾಡಿ ದೇಶಾಂತರಗಳಿಂದ ತರಿಸಿದ ಬಣ್ಣಗಳಿಂದ, ಬಂಗಾರದ ಲೇಪನಗಳಿಂದ. ಹೊಳೆಯುವ ವರ್ಣರೇಖೆಗಳಿಂದ, ಬಣ್ಣದ ಕಲ್ಲುಗಳನ್ನು ಕೂಡಾ ಉಪಯೋಗಿಸಿ, ಒಂದಕ್ಕಿಂತ ಒಂದು ಅದ್ಭುತವೆನಿಸುವ ವಿಘ್ನೇಶ್ವರನ ವಿಗ್ರಹಗಳನ್ನು ಮಾಡಿ, ಪ್ರದರ್ಶನದಲ್ಲಿ ಇರಿಸಿದ್ದರು.

ವಿಚಿತ್ರನಿಗೆ ಒಬ್ಬ ಕುಂಬಾರ ಮಿತ್ರನಿದ್ದ. ವಿಚಿತ್ರನು ಹತ್ತಿರವಿದ್ದು ಹೇಳಿದ ವಿಧವಾಗಿ ಅವನು ಆವೆ ಮಣ್ಣಿನಿಂದ ವಿಘ್ನೇಶ್ವರ ವಿಗ್ರಹವನ್ನು ಮಾಡಿದನು. ವಿಚಿತ್ರನು ಸುಣ್ಣ, ಮಸಿ, ಕಂದು ಮಣ್ಣು, ಹಳದಿ ಮಣ್ಣು, ಕೆಮ್ಮಣ್ಣುಗಳಿಂದ, ಹಸಿರೆಲೆಗಳ ರಸಗಳಿಂದ ವಿಗ್ರಹಕ್ಕೆ ಬಣ್ಣ ತೀಡಿದನು.

ವಿಚಿತ್ರನು ಮಾಡಿದ ಈ ಬಣ್ಣದ ಗಣಪತಿಯನ್ನು, ಚಿತ್ರಕಾರ ಪ್ರಮುಖರ ಪ್ರದರ್ಶನದಲ್ಲಿ ಇರಿಸಲು ನೋಡಿದಾಗ ಯಾರೂ ಅದಕ್ಕೆ ಎಡೆ ಕೊಡಲಿಲ್ಲ.

ವಿಚಿತ್ರನು ಪ್ರದರ್ಶನ ನಿರ್ವಾಹಕರೊಂದಿಗೆ, "ಅಯ್ಯಾ, ದಯವಿಟ್ಟು ಕಟ್ಟಕಡೆಯ ಒಂದು ಮೂಲೆಯಲ್ಲಾದರೂ ನನ್ನ ವಿಗ್ರಹವನ್ನು ಇರಿಸಿರಿ ಸ್ವಾಮೀ. ಅಳಿಲು ಭಕ್ತಿಯಂತೆ ನಾನು ಕೂಡಾ ನನ್ನ ಶಕ್ತಿಗೆ ಸಾಧ್ಯವಾದ ಹಾಗೆ ವಿಘ್ನೇಶ್ವರನಿಗೆ ಬಣ್ಣ ಹಾಕಿದೆನೆಂದುಕೊಳ್ಳುತ್ತ, ಆ ದೊಡ್ಡ ದೊಡ್ಡ ವಿಘ್ನೇಶ್ವರರ ಸಾಲಿನಲ್ಲಿ ನನ್ನ ವಿಘ್ನೇಶ್ವರನು ಕೂಡಾ ಇದ್ದರೆ ನೋಡಬೇಕೆಂದು ಒಂದು ಆಶೆಯಷ್ಟೇ ನನಗೆ. ಬೇರೆ ಕೋರಿಕೆಯಾವುದೂ ನನಗಿಲ್ಲವಯ್ಯಾ" ಎಂದು ದೀನನಾಗಿ ಪ್ರಾರ್ಥಿಸಿಕೊಂಡನು.

"ಸಾಧ್ಯವಿಲ್ಲಪ್ಪ, ಕುಲಗೋತ್ರ, ಊರು ಹೆಸರು ಇಲ್ಲದವನ ಕೈಯಿಂದಾದ ಬೊಂಬೆಗಳನ್ನು, ವಂಶ ಪ್ರತಿಷ್ಠೆಯುಳ್ಳವರ ವಿಗ್ರಹಗಳ ಜತೆಯಲ್ಲಿಡುವುದು ಸರಿಯಲ್ಲ. ಪ್ರಖ್ಯಾತ ಚಿತ್ರಕಾರರ, ಶಿಲ್ಪಿಗಳ ಸಾಲಿಗೆ ಸೇರಲು ತಕ್ಕ ಅರ್ಹತೆ ನಿನಗಿಲ್ಲ" ಎಂದು ಒತ್ತಿ ಹೇಳಿಬಿಟ್ಟರು. ನಿರ್ವಾಹಕರು ವಿಚಿತ್ರನಿಗೆ ನಿರಾಶೆಯಿಂದ ಅಳುವೇ ಬಂದಿತು.

ಆಗ ಅವನ ಕುಂಬಾರಮಿತ್ರನು, "ಹೋಗಲಿ ಬಿಡು. ಪ್ರದರ್ಶನ ಮಂದಿರದೊಳಗೆ ಇಡಲಾಗದಿದ್ದರೆ ಬೇಡ. ನಾವು ಈ ವಿಗ್ರಹವನ್ನು ಬೇರೊಂದು ಕಡೆಯಲ್ಲಿ ಇಡೋಣ, ನಡೆ" ಎಂದು ವಿಚಿತ್ರನಿಗೆ ಸಮಾಧಾನ ಹೇಳಿ, ಪ್ರದರ್ಶನ ಮಂದಿರದ ಪಕ್ಕದಲ್ಲಿದ್ದ, ಒಂದು ಬಾಳೇ ಮರದ ಅಡಿಯಲ್ಲಿ ಆ ವಿಗ್ರಹವನ್ನು ಇರಿಸಿದನು. ವಿಚಿತ್ರನೂ ಅವನ ಮಿತ್ರನೂ ಅಲ್ಲಿಯೇ ಕುಳಿತರು.

ಜನರು ಪ್ರದರ್ಶನ ಮಂದಿರದಲ್ಲಿರುವ ದೊಡ್ಡವರ ವಿಗ್ರಹಗಳನ್ನು ನೋಡುತ್ತ, ಗುಂಪು ಗುಂಪಾಗಿ

ಸೇರಿ, ವಿಗ್ರಹಗಳಿಗೆ ಉಪಯೋಗಿಸಲ್ಪಟ್ಟ ಬಣ್ಣಗಳ ಬೆಲೆಯನ್ನು ಕುರಿತೂ, ಚಿತ್ರಕಾರರ ವಂಶಗೌರವ, ಪದವಿಗಳನ್ನು ಕುರಿತೂ ವ್ಯಾಖ್ಯಾನಿಸಿಕೊಂಡಿರುವಾಗ, ಬಾಲಬಾಲೆಯರೆಲ್ಲಾ ವಿಚಿತ್ರನ ಸುತ್ತಲೂ ಸೇರಿ ಹರ್ಷಧ್ವಾನಮಾಡುತ್ತ ಆಸಕ್ತಿಯಿಂದ ಅವನು ತಯಾರಿಸಿದ ವಿಗ್ರಹವನ್ನು ನೋಡುತ್ತಿದ್ದರು.

ಆ ಸಮಯದಲ್ಲಿ ಆಕಾಶದಿಂದ ಜಾರಿಬಿದ್ದ ಜಂಟಿ ಮಿಂಚುಗಳಂತೆ ಕಾಣುವ ಇಬ್ಬರು ತರುಣಿಯರು ಚಿತ್ರ ಶಿಲ್ಪಗಳ ಪ್ರದರ್ಶನ ಮಂದಿರದೊಳಗೆ ಪ್ರವೇಶಿಸಿದರು., ಅವರ ಶರೀರದಲ್ಲಿ ರತ್ನಾಭರಣಗಳು ದೇದೀಪ್ಯಮಾನವಾಗಿ ಮರೆಯುತ್ತಿದ್ದುವು.

ಜನರು ಅವರನ್ನು ನೋಡಿ ಯಾವ ಲೋಕದ ವರಪ್ಪಾ ಎಂದು ಬೆರಗಾಗುತ್ತಿರಲು, ಅವರಲ್ಲಿ ಸ್ವಲ್ಪ ದೊಡ್ಡವಳಾದವಳು, "ನಮ್ಮದು ಕಲಾನಂದ ನಗರ. ನಮಗೆ ಹಿಡಿಸುವ ವಿನಾಯಕ ವಿಗ್ರಹವಿದ್ದರೆ ಕೊಂಡುಕೊಳ್ಳಬೇಕೆಂದು ಹತ್ತು ಸಾವಿರ ವರಹಗಳೊಂದಿಗೆ ತಿರುಗುತ್ತಿದ್ದೇವೆ" ಎನ್ನುತ್ತ ಬಂಗಾರದ ಎಳೆಗಳಿಂದ ಕೋದ ಜರತಾರೀ ಸಂಬಿಕೆಯನ್ನು ಗಲಗಲವಾಡಿಸಿದಳು. ಅದನ್ನು ನೋಡಿ, ಅಲ್ಲಲ್ಲಿದ್ದ ಕಲಾಕಾರರೆಲ್ಲಾ ಅವರವರ ಚಿತ್ರಶಿಲ್ಪಗಳ ಹತ್ತಿರ ಹೋಗಿ ನಿಂತರು.

"ನನ್ನ ಅಕ್ಕ ಪ್ರಸನ್ನವದನೆ ದೊಡ್ಡ ಗಾಯಕಮಣಿ ಮಾತ್ರವಲ್ಲದೆ, ಭಾರೀ ತಿಂಡಿಬಾಕಳು. ನೈವೇದ್ಯ ಪುಷ್ಟಿ ವಿಗ್ರಹಪುಷ್ಟಿಯಾದ ಮೇಲೆ ಹೊಟ್ಟೆಡೊಳ್ಳಾಗಿ ಬಂದಾಗ ಕೇಳಬೇಕು ಇವಳ ಹಾಡು. ಆಗ ತಿಳಿಯುತ್ತೆ ಗಾಯಕ ಸಿದ್ಧಾಂತಕ್ಕೆ ಇವಳ ತಾರ್ಕಾಣೆ ಹೇಗೆಂದು!" ಎನ್ನುತ್ತ ಸುಕುಮಾರಿಯಾಗಿ ಸಮ್ಮೋಹನಾಸ್ತ್ರದಂತಿದ್ದ ಚಿಕ್ಕವಳು ತನ್ನ ಕಾಲಿನ ಗೆಜ್ಜೆಗಳನ್ನು ಘಲುಘಲ್ಲಾಡಿಸಿಕೊಂಡು ನಲಿದಳು.

"ಈ ನನ್ನ ತಂಗಿ ಮೋಹನೆಯಷ್ಟು ವಾಚಾಳಿ ಇನ್ನೊಬ್ಬರಿಲ್ಲ. ಅದಕ್ಕಿಂತ ಹೆಚ್ಚು ನರ್ತನಾಮಣಿ. ನೋಡಲು ಸಣ್ಣವಳಾಗಿ ಕಾಣುತ್ತಾಳೆಯೇ ಹೊರತು ನನ್ನನ್ನೇ ಎತ್ತಿ ಗಿರಿಗಿರಿ ಸುತ್ತುತ್ತಾಳೆ! ಅಷ್ಟು ದೊಡ್ಡ ಶಕ್ತಿ ಇವಳಿಗಿದೆ. ನೃತ್ಯದಲ್ಲಿ ಇವಳ ಚುರುಕುತನ ನೋಡಲು ಕಣ್ಣುಗಳ ವೇಗ ಸಾಲದಪ್ಪ!" ಎಂದಳು ಅಕ್ಕ ಪ್ರಸನ್ನವದನೆ.

"ನಮ್ಮಿಂದ ಹಾಡಿಸಲಿಕ್ಕೂ ಆಡಿಸಲಿಕ್ಕೂ ಆ ಇಂದ್ರನಿಗೂ, ಕುಬೇರನಿಗೂ ಸಾಧ್ಯವಲ್ಲ. ಆ ಬಗೆಯ ನಮ್ಮ ನೃತ್ಯಗೀತಗಳನ್ನು ನಮಗೆ ಬೇಕಾದ ವಿಗ್ರಹದ ಮುಂದೆ ನಡೆಸುತ್ತೇವೆಂದು ಹರಕೆ ಹೇಳಿಕೊಂಡಿದ್ದೇವೆ" ಎಂದಳು ಮೋಹನೆ.

ಆ ಮಾತುಗಳಿಂದ ಜನರೆಲ್ಲಾ ಪರವಶರಾಗಿ ಮಂತ್ರಿಸಿದ ಹಾಗೆ ಅಕ್ಕಪಕ್ಕಗಳಿಗೆ ಸರಿದು ದೂರದೂರ ನಿಂತು ಅವರಿಗೆ ವಿಶಾಲವಾದ ದಾರಿ ಮಾಡಿದರು.

(ಮುಂದಿನ ಸಂಚಿಕೆಯಲ್ಲಿ ಮುಗಿಯುತ್ತದೆ)





# ತಾರುಮಾರಾದ ತೀರ್ಪು

ಅನೇಕ ವರ್ಷಗಳ ಹಿಂದೆ ಸಿಂಹಳ ದೇಶದಲ್ಲಿ ಒಬ್ಬ ವರ್ತಕನಿದ್ದನು. ಅವನು ಸಮುದ್ರ ವ್ಯಾಪಾರದಲ್ಲಿ ಅನೇಕ ಲಕ್ಷಗಳ ವರೆಗೆ ಧನಾರ್ಜನೆ ಮಾಡಿದನು. ಕಡೆಗೆ ಅವನು ವೃದ್ಧನಾಗಿ ಸಾಯುವ ಮೊದಲು, ತನ್ನ ಮಗನಾದ ಜಯಪಾಲನನ್ನು ಕರೆದು, ಅವನಿಗೆ ತನ್ನ ವ್ಯಾಪಾರದ ರಹಸ್ಯಗಳನ್ನೆಲ್ಲಾ ಹೇಳಿ, "ನೀನು ಕೂಡಾ ವ್ಯಾಪಾರವನ್ನು ಮುಂದುವರಿಸು. ಒಂದು ವಿಷಯ ಮಾತ್ರ ನೆನಪಿನಲ್ಲಿಟ್ಟುಕೋ. ಅಪ್ಪಿತಪ್ಪಿ ಕೂಡಾ ವಂಚಕ ಮಹಾ ಪಟ್ಟಣಕ್ಕೆ ಮಾತ್ರ ಹೋಗಲೇ ಬೇಡ" ಎಂದು ಎಚ್ಚರಿಕೆ ಕೊಟ್ಟನು.

ತಂದೆ ತೀರಿಹೋದ ಮೇಲೆ ಜಯಪಾಲನು ತನ್ನ ನಾಲ್ಕು ವ್ಯಾಪಾರ ನೌಕೆಗಳನ್ನು ತೆಗೆದುಕೊಂಡು ಸಮುದ್ರ ವ್ಯಾಪಾರವನ್ನು ನಡೆಸಿಕೊಂಡಿದ್ದನು. ವಂಚಕ ಮಹಾ ಪಟ್ಟಣವನ್ನು ಮರೆಯಲಿಲ್ಲ. ತಂದೆಯ ಎಚ್ಚರಿಕೆ ಅವನ ಕುತೂಹಲವನ್ನು ಕೆರಳಿಸಿಕೊಂಡೇ ಇತ್ತು. ಅಲ್ಲಿಗೆ ಹೋದರೆ ಏನು ನಡೆಯುತ್ತದೆಂಬುದನ್ನು ತಿಳಿಯಬೇಕೆಂಬ ಆಕಾಂಕ್ಷೆ ದಿನದಿಂದ ದಿನಕ್ಕೆ ಹೆಚ್ಚಾಯಿತು. ಅವನು ಒಳ್ಳೆಯ ಬುದ್ಧಿವಂತನು. ತನ್ನ ತಿಳುವಳಿಕೆಯಲ್ಲಿ ನಂಬುಗೆಯುಳ್ಳವನು. ಆದುದರಿಂದ ಯಾರಾದರೂ ತನಗೆ ಮೋಸ ಮಾಡಿದರೂ, ತಾನು ಮೋಸಕ್ಕೆ ಪ್ರತಿ ಮೋಸ ಮಾಡುವೆನೆಂಬ ಧೈರ್ಯದಲ್ಲಿ ಅವನು ಒಮ್ಮೆ ತನ್ನ ನಾಲ್ಕು ನೌಕೆಗಳೊಂದಿಗೆ ವಂಚಕ ಮಹಾಪಟ್ಟಣಕ್ಕೇ ಹೊರಟು ಅದರ ತೀರವನ್ನು ಸಮೀಪಿಸಿದನು.

ಆ ದಿನ ಚಂದ್ರೋದಯದ ಹೊತ್ತು. ಆ ಸಮಯಕ್ಕೆ ಜಯಪಾಲನು ನೌಕೆಗಳನ್ನು ಆ ಪಟ್ಟಣದ ರೇವಿನಲ್ಲಿ ನಿಲ್ಲಿಸಿ, ತನ್ನ ಬಿಲ್ಲು ಬಾಣಗಳನ್ನು ತೆಗೆದುಕೊಂಡು ಸಮುದ್ರ ತೀರದಲ್ಲಿ ಬೇಟೆಯಾಡಲು ಹೊರಟನು. ಒಂದು ಕಡೆಯಲ್ಲಿ ಅವನಿಗೆ ಒಂದು ನೀರುಕೊಕ್ಕರೆ ಕಾಣಿಸಿತು. ಅದು ಸಮುದ್ರದಲ್ಲಿರುವ ಮೀನುಗಳನ್ನು ಬೇಟೆಯಾಡಿಕೊಂಡಿತ್ತು, ಜಯಪಾಲನು ತನ್ನ ಬಿಲ್ಲಿಗೆ ಬಾಣಹೂಡಿ ಗುರಿ ನೋಡಿ, ಆ ಕೊಕ್ಕರೆಯ ಮೇಲೆ ಪ್ರಯೋಗಿಸಿದನು. ಒಂದೇ ಬಾಣದಿಂದ ಆ ಕೊಕ್ಕರೆ ಸತ್ತು ಸಮುದ್ರದ ನೀರಿನಲ್ಲಿ ಬಿದ್ದಿತು.

ಅಲ್ಲಿಗೆ ಸಮೀಪದಲ್ಲಿ ಮೀನು ಹಿಡಿದುಕೊಂಡಿದ್ದ ಒಬ್ಬ ಬೆಸ್ತನು ಜಯಪಾಲನು ಮಾಡಿದ ಕೆಲಸವನ್ನು ನೋಡಿ, ಓಡುತ್ತಾ ಅವನ ಬಳಿಗೆ ಬಂದು,

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



ಅಲ್ಲಿಂದ ಜಯಪಾಲನು ನಗರವನ್ನು ಪ್ರವೇಶಿಸಿ ನಡೆಯುತ್ತಿದ್ದಾಗ. ಅವನಿಗೆ ಇದಿರಾಗಿ ಬರುತ್ತಿದ್ದ ಒಬ್ಬ ಮನುಷ್ಯನು ಥಕ್ಕನೆ ನಿಂತು, "ಅಬ್ಬಾ! ಎಷ್ಟು ಕಾಲದ ಮೇಲೆ ಕಣ್ಣಿಗೆ ಬಿದ್ದೆಯಪ್ಪಾ! ಅನೇಕ ವರ್ಷಗಳ ಹಿಂದೆ ನಾನು ನನ್ನ ಬಲಗಿವಿಯನ್ನು ನಿನ್ನ ತಂದೆಯ ಹತ್ತಿರ ಗಿರವಿ ಇಟ್ಟು ಹತ್ತು ರೂಪಾಯಿ ಪಡೆದುಕೊಂಡಿದ್ದೇನೆ. ಆ ಸಾಲ ಕೊಟ್ಟು ತೀರಿಸುತ್ತೇನೆ. ಹಣ ತಯಾರಾಗಿದೆ. ಮೊದಲು ನನ್ನ ಕಿವಿಯನ್ನು ನನಗೆ ಕೊಡು" ಎಂದನು.

ಜಯಪಾಲನು ಬೆರಗಾಗಿ ಆ ಮನುಷ್ಯನನ್ನು ನೋಡಿದನು. ಅವನಿಗೆ ಎಡಗಿವಿಯೊಂದೇ ಇದ್ದಿತು, ಬಲದ ಕಿವಿ ಇರಲೇ ಇಲ್ಲ. "ನನ್ನ ತಂದೆ ನಿನ್ನ ಕಿವಿಯನ್ನು ಕುರಿತು ನನ್ನ ಹತ್ತಿರ ಏನೂ ಹೇಳಲಿಲ್ಲವಲ್ಲಾ?" ಎಂದನು ಆ ಮನುಷ್ಯನೊಂದಿಗೆ.

"ಈ ಸುಳ್ಳನ್ನೆಲ್ಲ ಕಟ್ಟಿಡು. ನನ್ನ ಕಿವಿಯನ್ನು ನನಗೆ ಕೊಡಿಸದೆ ಹೋದರೆ ನಿನ್ನ ಮೇಲೆ ಫಿರ್ಯಾದಿ ಮಾಡುತ್ತೇನೆ, ನೋಡಿಕೋ!" ಎಂದು ಹೆದರಿಸಿ ಆ ಮನುಷ್ಯನು ಬರಬರನೆ ಹೊರಟು ಹೋದನು.

ಜಯಪಾಲನು ಮತ್ತಿಷ್ಟು ಮುಂದೆ ಹೋಗುತ್ತಿರಲು ಒಬ್ಬಳು ಸ್ತ್ರೀ ಅವನ ಮುಂದೆ ಬಂದು, "ನೋಡಪ್ಪಾ ಕಂದಾ, ಹದಿನಾರು ವರ್ಷಗಳ ಕೆಳಗೆ ನಿನ್ನ ಅಪ್ಪ ಈ ಊರಿಗೆ ಬಂದು ನನ್ನನ್ನು ಮದುವೆ ಮಾಡಿಕೊಂಡು, ಕಡೆಗೆ ತನ್ನ ಪಾಡಿಗೆ ಹೋಗಿಬಿಟ್ಟರು. ನನಗೆ ಅಶನಾರ್ಥದ ಲೆಕ್ಕದಲ್ಲಿ ಹತ್ತು ಸಾವಿರ ರೂಪಾಯಿ ಕೊಡುವೆನೆಂದು ಪ್ರಮಾಣ ಮಾಡಿ ಹೇಳಿದ್ದಾರಪ್ಪಾ. ಆ ಹಣ ನೀನು ಕೊಡುವೆಯಾ ಇಲ್ಲಾ, ಮಹಾರಾಜರ ಹತ್ತಿರ ಫಿರ್ಯಾದಿ ಮಾಡಲಾ?" ಎಂದು ಕೇಳಿದಳು.

ಜಯಪಾಲನು ಈ ದುಷ್ಟತನವನ್ನು ಸಹಿಸಲಾಗದೆ, "ಹೋಗು, ಮಾಡಿಕೋ. ನಾನು ನಿನಗೆ ಒಂದು ಕಾಸೂ ಕೊಡಲಾಲೆ" ಎಂದು ಹೇಳಿ ತನ್ನ

"ಯಾರಯ್ಯಾ ನೀನು? ನನ್ನ ತಂದೆಯನ್ನು ಕೊಂದುಬಿಟ್ಟೆ! ಅಯ್ಯೋ! ನನ್ನಪ್ಪಾ! ಪಿತೃ ದೇವರೇ! ಹೋದಿರಾ! ಕೊಂದವನ ಮೇಲೆ ಮಹಾರಾಜರ ಹತ್ತಿರ ಹೋಗಿ ಫಿರ್ಯಾದಿ ಮಾಡುತ್ತೇನೆ. ನೋಡುತ್ತಾ ಇರು!" ಎಂದನು ಕೋಪದಿಂದ.

"ಏನಂದೆ? ಆ ಕೊಕ್ಕರೆ ನಿನ್ನ ತಂದೆಯೋ?" ಎಂದು ಜಯಪಾಲನು ಆಶ್ಚರ್ಯದಿಂದ ಕೇಳಿದನು.

"ಹೌದು. ಹೋದ ಜನ್ಮದಲ್ಲಿ ಅದು ನನ್ನ ತಂದೆ. ಈಗ ನೀರು ಕೊಕ್ಕರೆಯಾಗಿ ಜನ್ಮ ಎತ್ತಿ, ನನಗೆ ಮೀನುಗಳ ಬೇಟೆಯಲ್ಲಿ ಸಹಾಯ ಮಾಡುತ್ತಿದ್ದಾರೆ. ಇನ್ನು ಮೇಲೆ ನನ್ನ ಜೀವನವೇ ಕೆಟ್ಟಿತು. ಗೊತ್ತಾಯಿತೆ?" ಎಂದನು ಆ ಹಳ್ಳಿಯವನು.

ಜಯಪಾಲನಿಗೆ ಕೋಪ ಬಂತು, "ಹೋಗೋ ಹುಚ್ಚ! ಯಾರ ಹತ್ತಿರ ಹೇಳಿಕೊಳ್ಳುವೆಯೋ ಹೇಳಿಕೋ" ಎಂದು ಮೀನು ಹಿಡಿಯುವವನನ್ನು ಚೆನ್ನಾಗಿ ಗದರಿಸಿದನು.

ನೌಕೆಗಳ ಕಡೆಗೆ ಹಿಂದಿರುಗಿದನು. ಅಲ್ಲಿ ರೇವಿನ ಹತ್ತಿರ ಅವನಿಗೆ ಒಬ್ಬ ಕ್ಷೌರಿಕನು ಕಂಡುಬಂದನು. "ಕ್ಷೌರಮಾಡಿಕೊಳ್ಳುವಿರಾ ದೊರೇ ?" ಎಂದು ಕೇಳಿದನು ಕ್ಷೌರಿಕ.

"ಏನು ತೆಗೆದುಕೊಳ್ಳುತ್ತೀ?" ಎಂದು ಜಯಪಾಲನು ಪ್ರಶ್ನಿಸಿದನು.

"ಏನೋ ನನ್ನನ್ನಿಷ್ಟು ಸಂತೋಷಪಡಿಸಿದರೆ ಸಾಕು ದೊರೇ" ಎಂದನು ಕ್ಷೌರಿಕ.

ಸರಿಯೆಂದು ಜಯಪಾಲನು ಅವನಿಂದ ಕ್ಷೌರ ಮಾಡಿಸಿಕೊಂಡ ಮೇಲೆ ಅವನಿಗೆ ಒಂದು ರೂಪಾಯಿ ಕೊಡಲು ನೋಡಿದನು. ಕ್ಷೌರಿಕನು ತೆಗೆದುಕೊಳ್ಳಲಿಲ್ಲ. ಐದು ರೂಪಾಯಿ ಕೊಡಲು ಹೋದರೂ ನಿರಾಕರಿಸಿಬಿಟ್ಟನು. ಜಯಪಾಲನಿಗೆ ಸಿಟ್ಟು ಬಂದು, "ನಿನಗೆ ನಾನೇನೂ ಕೊಡಲಾರೆ. ಎಲ್ಲಿ ದೂರಿಕೊಂಡರೂ ಚಿಂತಿಲ್ಲ, ನಡೆ!" ಎಂದನು.



ಮೀನು ಹಿಡಿಯುವ ಹಳ್ಳಿಗನೂ, ಕಿವಿಯಿಲ್ಲದವನೂ, ಸ್ತ್ರೀಯೂ, ಕ್ಷೌರಿಕನೂ ಮಹಾರಾಜನ ಸಭೆಗೆ ಹೋಗಿ, ತಮ್ಮ ತಮ್ಮ ಸಂಗತಿಯನ್ನು ಕುರಿತು ಫಿರ್ಯಾದಿಗಳನ್ನು ಮಾಡಿದರು. ಜಯಪಾಲನನ್ನು ಕೂಡಲೇ ರಾಜನ ಸಭೆಗೆ ಕರೆಯಿಸಲಾಯಿತು. ವಿಚಾರಣೆ ಪ್ರಾರಂಭವಾಯಿತು. ಮೊದಲು ಮೀನು ಹಿಡಿಯುವ ಹಳ್ಳಿಗನು ಮಹಾರಾಜನೊಂದಿಗೆ, "ಮಹಾಪ್ರಭೂ! ಸತ್ತು ನನ್ನ ತಂದೆ ನೀರು ಕೊಕ್ಕರೆಯಾಗಿ ಹುಟ್ಟಿ ಮೀನಿನ ಬೇಟೆಯಲ್ಲಿ ನನಗೆ ತುಂಬಾ ಸಹಾಯಮಾಡುತ್ತಿದ್ದರು. ಈ ಮನುಷ್ಯ ಆ ಕೊಕ್ಕರೆಯನ್ನು ಬಾಣದಿಂದ ಕೊಂದು, ನನಗೆ ದೊಡ್ಡ ನಷ್ಟವನ್ನುಂಟುಮಾಡಿದ್ದಾನೆ." ಎಂದನು.

ರಾಜನು ಜಯಪಾಲನ ಕಡೆಗೆ ತಿರುಗಿ, "ಈ ಮೀನು ಹಿಡಿಯುವವನಿಗೆ ಪರಿಹಾರವಾಗಿ ನೀನು ಒಂದು ನೌಕೆಯನ್ನು ಕೊಡ ತಕ್ಕದ್ದು" ಎಂದು ತೀರ್ಪು ಹೇಳಿದನು.

ಆ ಮೇಲೆ ಕಿವಿ ಇಲ್ಲದವನು ಫಿರ್ಯಾದಿ ಮಾಡಿದನು. "ಮಹಾಪ್ರಭೂ, ಇವನ ತಂದೆ ನನ್ನ ಬಲದ ಕಿವಿಯನ್ನು ಗಿರವಿ ಇಟ್ಟುಕೊಂಡು ಹತ್ತು ರೂಪಾಯಿ ಸಾಲ ಕೊಟ್ಟರು. ನಾನು ಆ ಸಾಲವನ್ನು ಕೊಟ್ಟುಬಿಡುತ್ತೇನೆ, ನನ್ನ ಕಿವಿಯನ್ನು ನನಗೆ ಕೊಡು ಅಂದರೆ, ಈತ ಬೇಕಾದಲ್ಲಿ ಹೋಗಿ ದೂರಿಕೋ ಅಂದುಬಿಟ್ಟ" ಎಂದನು ಕಿವಿ ಇಲ್ಲದವನು.

"ದೊಡ್ಡ ತಪ್ಪು. ಜಯಪಾಲನು ಇವನಿಗೆ ಒಂದು ನೌಕೆಯನ್ನು ಪರಿಹಾರವಾಗಿ ದಂಡ ಕೊಡಬೇಕೆಂದು ತೀರ್ಪು ಹೇಳುತ್ತೇನೆ" ಎಂದನು ರಾಜ.

ಆ ಮೇಲೆ ಸ್ತ್ರೀ ಜಯಪಾಲನ ಮೇಲೆ ಫಿರ್ಯಾದಿ ಮಾಡಿದಳು. ರಾಜನು ಅವಳಿಗೆ ಕೂಡಾ ಜಯಪಾಲನು ಒಂದು ನೌಕೆಯನ್ನು ಕೊಡಬೇಕೆಂದು ತೀರ್ಪು ಹೇಳಿದನು.

ಕಡೆಗೆ ಕ್ಷೌರಿಕನು ಮುಂದೆ ಬಂದು ತನ್ನ ಫಿರ್ಯಾದಿಯನ್ನು ವಿವರಿಸಿದನು. "ಅಯ್ಯಾ, ಇವರು ನನ್ನಿಂದ



ಕ್ಷೌರಮಾಡಿಸಿಕೊಂಡು ನನ್ನನ್ನು ಸಂತೋಷಪಡಿಸುವೆನೆಂದರು. ಇವರದೊಂದು ನೌಕೆಯನ್ನು ನನಗೆ ಕೊಟ್ಟರೆ ಸಂತೋಷಪಡುತ್ತೇನೆ. ಹಣಕಾಸು ಏನೂ ಬೇಡ. ನೌಕೆ ಕೊಡದಿದ್ದರೆ ನನಗೆ ಸಂತೋಷವಾಗಲಿಕ್ಕೇ ಇಲ್ಲ" ಎಂದನು.

"ಕ್ಷೌರಿಕನ ಮಾತು ನ್ಯಾಯವೇ ಆಗಿದೆ. ಆದುದರಿಂದ ಜಯಪಾಲನು ಈ ಕ್ಷೌರಿಕನಿಗೆ ಒಂದು ನೌಕೆ ಕೊಡಬೇಕು." ಎಂದು ಮಹಾರಾಜನ ತೀರ್ಪು ಬಂತು.

ಈಗ ಜಯಪಾಲನ ಕೊರಳಿನಲ್ಲಿರುವ ಒಂದು ರತ್ನ ಹಾರದ ಹೊರತು ಉಳಿದ ಅವನ ಸೊತ್ತುಗಳೆಲ್ಲಾ ಹೋದುವು. "ಈಗ ಏನುಮಾಡಲಿ? ಈ ಇಕ್ಕಟ್ಟಿನಿಂದ ಹೇಗೆ ಪಾರಾಗಲಿ?" ಎಂದು ಅವನು ಆಲೋಚಿಸುತ್ತಾ ಇರುವಾಗ, ರಾಜನ ಸಭೆಗೆ ರಾಜನ ಹತ್ತು ವಯಸ್ಸಿನ ಮಗನು ಬಂದನು.

ಕೂಡಲೇ ಜಯಪಾಲನು ತನ್ನ ಕೊರಳಿನಲ್ಲಿದ್ದ ರತ್ನಹಾರವನ್ನು ತೆಗೆದು ರಾಜಕುಮಾರನ ಕೊರಳಿಗೆ ಹಾಕಿದನು. ಅದನ್ನು ನೋಡಿ ಸಭೆಯಲ್ಲಿರುವವರೆಲ್ಲಾ ಸಂತೋಷದ ಧ್ವನಿ ತೆಗೆದು ಚಪ್ಪಾಳೆ ತಟ್ಟಿದರು.

ತನ್ನ ಕುಮಾರನಿಗೆ ಜಯಪಾಲನು ಕೊಟ್ಟ ಬಹುಮಾನವನ್ನು ನೋಡಿ ರಾಜನಿಗೂ ಸಂತೋಷವಾಯಿತು. ರಾಜನು ಮಗನನ್ನು ಎತ್ತಿ ಮಡಿಲಲ್ಲಿ ಕೂಡಿಸಿಕೊಂಡು, ಆ ರತ್ನಹಾರವನ್ನು ನೋಡಿ ಮೆಚ್ಚಿ ಮುದ್ದಾಡಿದನು.

ಜಯಪಾಲನು ಸಭಿಕರ ಕಡೆಗೆ ತಿರುಗಿ, "ನಾನು ರಾಜಕುಮಾರನಿಗೆ ಕೊಟ್ಟ ಬಹುಮಾನವನ್ನು ನೋಡಿ ಸಂತೋಷಪಡದೇ ಇರುವವರು ಯಾರಾದರೂ ಇರುವರೇ?" ಎಂದು ಕೇಳಿದನು.

"ಇಲ್ಲ! ಇಲ್ಲ! ಎಲ್ಲರೂ ಸಂತೋಷಿಸಿದ್ದೇವೆ!" ಎಂದು ಎಲ್ಲರೂ ಕೂಗಿ ಕೂಗಿ ಹೇಳಿದರು.

ಜಯಪಾಲನು ಕ್ಷೌರಿಕನನ್ನು ನೋಡಿ, "ಏನೋ, ನೀನು ಸುಮ್ಮನಿರುವೆಯಾ? ನೀನೂ ಕೂಗಿ ಸಂತೋಷಪಟ್ಟೆಯಾ?" ಎಂದು ಕೇಳಿದನು.

ಕ್ಷೌರಿಕನು ಸಂತೋಷಿಸಿದ್ದೇನೆಂದು ಹೇಳಲೇಬೇಕಾಯಿತು. ಆಗ ಜಯಪಾಲನು ರಾಜನನ್ನು ನೋಡಿ, "ಮಹಾಪ್ರಭುಗಳು ಕೇಳಿದಿರಷ್ಟೆ? ನಾನು ಈಗ ಈ ಕ್ಷೌರಿಕನನ್ನೂ ಸಂತೋಷಪಡಿಸಿದ್ದೇನೆ. ಆದುದರಿಂದ ಅವನಿಗೆ ನಾನು ನೌಕೆಯನ್ನು ಕೊಡುವ ಅಗತ್ಯ ಇಲ್ಲವೆಂದು ತೋರುತ್ತದೆ" ಎಂದನು.

"ನಿಜ! ನಿಜ! ಬೇಕಾಗಿಲ್ಲ" ಎಂದನು ರಾಜ.

ಆ ಮೇಲೆ ಜಯಪಾಲನು ಆ ಸ್ತ್ರೀಯನ್ನು ನೋಡಿ, "ಅಮ್ಮಾ, ನಿನ್ನ ಅಶನಾರ್ಥದ ವಿಷಯದಲ್ಲಿ ಒಂದು ಮಾತು ಹೇಳುತ್ತೇನೆ. ಅಶನಾರ್ಥವೇನೋ ಅದನ್ನು ಕೊಡುತ್ತೇನೆ. ಆದರೆ ಒಂದು ತೊಂದರೆ ಇದೆ. ನಮ್ಮ ದೇಶದ ಆಚಾರದಂತೆ ಹೆಂಡತಿಯಾದವಳು ಗಂಡನೊಂದಿಗೆ ಸಹಗಮನ ಮಾಡಬೇಕಾಗುತ್ತದೆ. ದುರದೃಷ್ಟವಶದಿಂದ ನಿನ್ನ ತಂದೆಯವರು ವರ್ಷದ ಹಿಂದೆ ಸತ್ತರು. ಆದ್ದರಿಂದ ನೀನು ಚಿತಿ ಸಿದ್ಧಮಾಡಿ

ಸುಟ್ಟುಹೋದರೆ, ನಿನ್ನ ವಾರಸರಿಗೆ ಹತ್ತು ಸಾವಿರ ಕೊಡುತ್ತೇನೆ" ಎಂದನು.

"ನಾನು ಬಲವಂತವಾಗಿ ಎಂದಿಗೂ ಆತ್ಮಹತ್ಯ ಮಾಡಿಕೊಳ್ಳುವುದಿಲ್ಲ." ಎಂದಳು ಆ ಸ್ತ್ರೀ ಹೆದರುತ್ತಾ.

ಜಯಪಾಲನು ರಾಜನೊಂದಿಗೆ, "ಮಹಾ ಪ್ರಭೂ, ಈ ಧರ್ಮಸಂಕಟದ ವಿಷಯದಲ್ಲಿ ನಾನು ಅಶನಾರ್ಥ ಕೊಡುವುದೋ, ಪರಿಹಾರದ ನೌಕೆ ಕೊಡುವುದೋ ಇವೆರಡೂ ನ್ಯಾಯವಲ್ಲವೆಂದು ಭಾವಿಸುತ್ತೇನೆ" ಎಂದನು.

"ಹೌದು ಹೌದು! ನೌಕೆ ಕೊಡಬೇಕಾಗಿಲ್ಲ" ಎಂದನು ರಾಜ. ತರುವಾಯ ಜಯಪಾಲನು ಕಿವಿಯಿಲ್ಲದವನನ್ನು ನೋಡಿ, "ನೋಡಪ್ಪಾ, ನೀನು ಗಿರವಿ ಇಟ್ಟ ಕಿವಿಯನ್ನು ತಿರುಗಿ ಕೊಡಲು ನನಗೇನೂ ಅಭ್ಯಂತರವಿಲ್ಲ. ನನ್ನ ತಂದೆಯವರ ಕಾಲದಲ್ಲಿ ಸಾವಿರಾರು ಜನರು ತಮ್ಮ ಕಿವಿಗಳನ್ನು ಅಡವಿಟ್ಟು ನಿನ್ನ ಹಾಗೇ ಸಾಲ ತೆಗೆದುಕೊಂಡಿದ್ದಾರೆ. ಅವುಗಳಲ್ಲಿ ನಿನ್ನ ಕಿವಿಯನ್ನು ಗುರುತಿಸುವುದು ಕಷ್ಟವಾಗಿದೆ. ಆದುದರಿಂದ ಮಾದರಿಗಾಗಿ ನಿನ್ನ ಎಡದ ಕಿವಿಯನ್ನು ಕೊಯ್ದುಕೊಟ್ಟರೆ, ಅದನ್ನಿಟ್ಟು ಹೋಲಿಸಿ ನೋಡಿ ನಿನ್ನ ಎರಡು ಕಿವಿಗಳನ್ನೂ ನಿನಗೆ ಕೂಡಲೇ ಕಳುಹಿಸುತ್ತೇನೆ" ಎಂದನು.

ಇದಕ್ಕೆ ಕಿವಿಯಿಲ್ಲದವನು ಒಪ್ಪಲಿಲ್ಲ. ಅವನಿಗೂ ನೌಕೆಯನ್ನು ಪರಿಹಾರಕೊಡಬೇಕಾಗಿಲ್ಲವೆಂದು ರಾಜನು ತೀರ್ಪನ್ನು ಬದಲಾಯಿಸಿದನು.

ಅನಂತರ ಜಯಪಾಲನು ಮಹಾರಾಜನೊಂದಿಗೆ, "ಮಹಾ ಪ್ರಭುಗಳೇ, ನನ್ನ ತಂದೆಯವರು ಸತ್ತು ಹೋದ ಮೇಲೆ ಮೀನಾಗಿ ಹುಟ್ಟಿ, ನನಗೆ ನೌಕೆಗಳನ್ನು ನಡೆಯಿಸುವುದರಲ್ಲಿ ಸಮುದ್ರದಲ್ಲಿ ಸಹಾಯ ಮಾಡುತ್ತಾ ಇರುವರು. ಅಂತಹ ಸಮಯದಲ್ಲಿ ಈ ಮೀನು ಹಿಡಿಯುವವನ ತಂದೆ ಕೊಕ್ಕರೆಯ ರೂಪದಲ್ಲಿ ಬಂದು ನನ್ನ ತಂದೆಯನ್ನು ನುಂಗಿಬಿಟ್ಟನು. ಆದುದರಿಂದಲೇ ನಾನು ಆ ಕೊಕ್ಕರೆಯನ್ನು ಕೊಂದೆನು. ಮೀನಿನ ರೂಪದಲ್ಲಿದ್ದ ನನ್ನ ತಂದೆ ಆ ವಿಧವಾಗಿ ಸಾಯದಿರುತ್ತಿದ್ದರೆ ನಾನು ಈ ಕಡೆಗೆ ಬರುತ್ತಲೇ ಇದ್ದಿಲ್ಲ" ಎಂದನು.

ಈ ಮಾತು ಕೇಳಿ ಮಹಾರಾಜನು ಸಂತೋಷಪಟ್ಟು, ಮೀನು ಹಿಡಿಯುವನಿಗೆ ಕೂಡಾ ಪರಿಹಾರ ಕೊಡಬೇಕಾಗಿಲ್ಲವೆಂದು ತನ್ನ ತೀರ್ಪು ಹೇಳಿದನು.

ತರುವಾಯ ಜಯಪಾಲನು ಒಂದು ವಾರದವರೆಗೆ ಆ ರಾಜನ ಅತಿಥಿಯಾಗಿದ್ದು, ರಾಜನಿಂದ ಕೆಲವು ಬಹುಮಾನಗಳನ್ನು ಪಡೆದು, ತನ್ನ ನಾಲ್ಕು ನೌಕೆಗಳನ್ನೂ ಸಾಗಿಸಿಕೊಂಡು. ತನ್ನ ದೇಶಕ್ಕೆ ಹೊರಟು ಹೋದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

**ಗೆದ್ದ ಶೀರ್ಷಿಕೆಗಳು ೧೯೮೪ ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.**



Devidas Kasbekar

★



Chandrapal Singh

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಡಿಸೆಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂ. ೫೦ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟ್‌ಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಅಕ್ಟೋಬರ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ತೊಟ್ಟೀಲಿ ಕೂತು ಬಿಟ್ರೆ ಆಯ್ತಾ?**

ಎರಡನೇ ಫೋಟೋ: **ಇದು ತುಂಬಿದರೆ ತಾನೇ ಸ್ನಾನಾಪಾನಾ ಎಲ್ಲಾ !**

ಕಳುಹಿಸಿದವರು: **ಕೆ. ಎಸ್. ಸತೀಶ್, ಅಶೋಕನಗರ, ಮಂಡ್ಯ.**

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




# A burst of frolic!

**NP**

**007**

**BUBBLE GUM**

Treat yourself to
NP 007 bubble gum.
Savour its delicious flavour
and revel endlessly
with its bubble-power.
Bubble after bubble.




**THE NATIONAL PRODUCTS,**
Bangalore 560 032.

Pioneers in chewing gums and bubble gums.

*Beware of spurious and inferior Bubble Gums.*

Proven quality certified by
IS: 6747




Dattaram-NP 2/82 G